# ಲಿಂಗವಂತ ಧರ್ಮದ ಸತ್ಯದರ್ಶನ

ರಂಜಾನ್ ದರ್ಗಾ



## ಗ್ರಂಥ ದಾಸೋಹಿಗಳು

ಗಾಂಧೀಜಿ ಅನುಯಾಯಿ, ತ್ರಿವಿಧದಾಸೋಹಿ ಮತ್ತು ಆದರ್ಶ ಶಿಕ್ಷಕ ದಂಪತಿಗಳಾದ



ಲಿಂಗೈಕ್ಯ ಶರಣ ಶ್ರೀ ಮಡಿವಾಳಪ್ಪ ಕಲಹಾಳ ಮತ್ತು
ಲಿಂಗೈಕ್ಯ ಶರಣೆ ಶ್ರೀಮತಿ ಪಾರ್ವತೆವ್ವ ಮ. ಕಲಹಾಳ
ಇವರುಗಳ ಸ್ಮರಣಾರ್ಥ

ಶರಣ ದಂಪತಿಗಳಾದ
ಶರಣ ಡಾ. ಸಂಗಮೇಶ ಮ. ಕಲಹಾಳ ಎಂ.ಡಿ (ಆಯು)
ನಿವೃತ್ತ ಜಿಲ್ಲಾ ಆಯುಷ್ ಅಧಿಕಾರಿಗಳು, ಕೊಪ್ಪಳ
ಶರಣೆ ಶ್ರೀಮತಿ ಸರೋಜಿನಿ ಸಂ. ಕಲಹಾಳ
ಶಿಕ್ಷಕಿಯರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಕೊಪ್ಪಳ



ಶ್ರೀ ಮಾಚಿದೇವ ಅಧ್ಯಯನ ಮತ್ತು ಸಂಶೋಧನ ಪೀಠ ಪ್ರಸಾರಾಂಗದಿಂದ ಪ್ರಕಟಿತ
ಜ್ಞಾನ ದಾಸೋಹ ಮಾಲೆ 6 ನೇ ಗ್ರಂಥಪುಷ್ಪ

# ಲಿಂಗವಂತ ಧರ್ಮದ ಸತ್ಯದರ್ಶನ

ರಂಜಾನ್ ದರ್ಗಾ



ಶ್ರೀ ಮಾಚಿದೇವ ಅಧ್ಯಯನ ಮತ್ತು ಸಂಶೋಧನ ಪೀಠ ಪ್ರಸಾರಾಂಗ
ಜಗದ್ಗುರು ಶ್ರೀ ಮಾಚಿದೇವ ಮಹಾಸಂಸ್ಥಾನ ಮಠ,
ಮಡಿವಾಳ ಗುರುಪೀಠ, ಚಿತ್ರದುರ್ಗ

**LINGAVANTA DHARMADA SATYADARSHANA :** By
**Ramjan Darga**
"Vachana", Siddharoodha Colony
Madihal, Dharwad- 580006
Mobile: 8660173149
E-mail: ramjandarga@gmail.com

Enlarged 12th Impression : May 2023



Pages : 96

Copies : 1000

Price : Rs. 100

Book size : 1/8th Demy

Paper used : 70 gsm maplitho

Published By :
Shri Machidev Adhyayan Mattu Samshodhana Peeth's Prasaranga,
Jagadguru Shri Machidev Mahasamsthan Math, Near M. K. Hatti,
Old Davangere Road, Old NH 4, Chitradurga-577502
Ph : 9482151960, 9900264124.
E-mail : machidevamatt9@gmail.com

Printed By
Ravindra S. Akalwadi
Manohar Printing Press
Market, Dharwad 580 001
M : 9141201170



## ಡಾ ಶ್ರೀ ಬಸವಮಾಚಿದೇವ ಮಹಾಸ್ವಾಮಿಗಳು

**ಜಗದ್ಗುರು ಶ್ರೀ ಮಾಚಿದೇವ ಮಹಾಸಂಸ್ಥಾನ ಮಠ, ಮಡಿವಾಳ ಗುರುಪೀಠ, ಚಿತ್ರದುರ್ಗ**

# ಆಶಯ ನುಡಿಗಳು

ಪ್ರತಿಯೊಬ್ಬರಿಗೆ ಧಾರ್ಮಿಕ ಅರಿವು ಬಹಳ ಮುಖ್ಯ. ಇಲ್ಲಿಯವರೆಗೆ ಬೇರೆಯ ಮಠಗಳನ್ನು ಮಾತ್ರ ಕಾಣುತ್ತಿದ್ದೇವು. ಅವುಗಳಿಂದ ಹೇಗೆ ಜನ ಪ್ರಜ್ಞಾವಂತರಾದರು, ವೈಯಕ್ತಿಕ ಹಾಗೂ ಸಾಮಾಜಿಕವಾಗಿ ಬೆಳವಣಿಗೆಯಾಗಿವೆ ಎಂಬುದನ್ನು ನೋಡುತ್ತಿದ್ದೀರಿ. ಇದರಿಂದಾಗಿ ಮಠಗಳು ಜನರ ಶಕ್ತಿಯ ಕೇಂದ್ರಗಳಾಗಿವೆ. ಬಹುಶಃ ಮಠಗಳು ಇರದಿದ್ದರೇ ಧಾರ್ಮಿಕ ವಂಚನೆಯನ್ನು ಅನುಭವಿಸಬೇಕಾಗಿತ್ತು. ಇಂದಿನ ಕಾಲಮಾನದಲ್ಲಿ ಮಠಗಳು ಅದನ್ನು ತಪ್ಪಿಸಿ ಪ್ರತಿಯೊಬ್ಬರನ್ನು ಪ್ರಜ್ಞಾವಂತರನ್ನಾಗಿಸಲು ಮತ್ತು ಸಾಮಾಜಿಕ ಜವಾಬ್ದಾರಿಯ ಜಾಗೃತಿ ಮೂಡಿಸಲು ಸಹಾಯವಾಗಿವೆ. ಎಲ್ಲರನ್ನು ಎತ್ತುವ ಕಾರ್ಯ ಮಾಡುತ್ತಿವೆ.

ಸಮಾಜ ಸುಧಾರಕರೂ, ಆಧುನಿಕ ಯುಗದ ಬಸವಣ್ಣನವರೆನಿಸಿರುವ ಚಿತ್ರದುರ್ಗ ಮುರುಘಾಮಠದ ಡಾ. ಶಿವಮೂರ್ತಿ ಮುರುಘಾ ಶರಣರ ದೂರದೃಷ್ಟಿಯಿದಾಗಿ ಹಿಂದುಳಿದ ಸಮಾಜಗಳ ಸರ್ವಾಂಗೀಣ ಪ್ರಗತಿಗೆ ಮಠಗಳನ್ನು ಸ್ಥಾಪಿಸಿ, ಅದೇ ಸಮಾಜದವರನ್ನು ಗುರುಗಳನ್ನಾಗಿ ಮಾಡಿ ದುರ್ಬಲ ವರ್ಗಗಳಿಗೆ ಶಕ್ತಿ ತುಂಬಿದ್ದಾರೆ. ಅವರ ಪ್ರಗತಿಯ ಕನಸುಗಳ ಸಾಕಾರದಲ್ಲಿ ಚಿತ್ರದುರ್ಗದ ಶ್ರೀ ಮಾಚಿದೇವ ಮಹಾಸಂಸ್ಥಾನ ಮಠವೂ ಒಂದು !

ಮಡಿವಾಳ ಜನಾಂಗದಲ್ಲಿ ಒಗ್ಗಟ್ಟು ಮತ್ತು ಸೌಹಾರ್ದತೆಗಳಿಂದ ಜಾಗೃತಿ ಮೂಡಿಸಲಾಗುತ್ತಿದೆ. ಮಡಿವಾಳರಲ್ಲಿ ಸಾಮಾಜಿಕ ಸಂಚಲನ ಮೂಡಿಸುವ ಕಾರ್ಯ ಪ್ರಗತಿಯಲ್ಲಿದೆ. ಈ ಕಾರ್ಯದಲ್ಲಿ ಅನೇಕ ಅನುಭವಗಳನ್ನು ತಂದುಕೊಟ್ಟಿದೆ. ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಶ್ರೀ ಮಾಚಿದೇವ ಮಹಾಸಂಸ್ಥಾನ ಮಠವು ಅನೇಕ ಸಾಧನೆಗಳಿಗೆ ಸಾಕ್ಷಿಯಾಗಿದೆ.

ಅಧ್ಯಾತ್ಮವೆಂದರೇನು ? ಧರ್ಮವೆಂದರೇನು ? ಎನ್ನುವ ಸ್ಥಿತಿ ಇದೆ. ಕಂಡ ಕಂಡ ದೇವರನ್ನು, ಮನೆದೇವರನ್ನು, ಹಲವು ಮೂರ್ತಿಗಳನ್ನು, ಗಿಡಮರಗಳನ್ನು ಪೂಜಿಸುವುದು. ಯಜ್ಞ ಯಾಗಾದಿಗಳು ವ್ರತ ನಿಯಮಗಳನ್ನು ಆಚರಿಸುವುದು. ಮೂಢನಂಬಿಕೆಗಳು ಕಂದಾಚಾರಗಳನ್ನು ಅನುಸರಿಸುವುದು ಇದೆ.

ಸಾಮಾಜಿಕವಾಗಿ ಕರ್ನಾಟಕದ ಮಡಿವಾಳ ಸಮುದಾಯದಲ್ಲಿ ಅನೇಕ ವಿಭಿನ್ನತೆಗಳಿವೆ. ಪ್ರಾದೇಶಿಕವಾಗಿ ಮಧ್ಯಭಾಗದಲ್ಲಿ ಮಡಿವಾಳರು, ಆಂಧ್ರಪ್ರದೇಶ ಮತ್ತು ತಮಿಳುನಾಡು ಗಡಿಭಾಗದಲ್ಲಿ ಮೋಟದವರು, ನಾಮಧಾರಿಗಳು (ತೆಲಗು ಅಗಸರು), ಪಶ್ಚಿಮ ಘಟ್ಟಭಾಗದಲ್ಲಿ ತುಳು ಅಗಸರು, ಕೊಡವ ಅಗಸರು, ಮಹಾರಾಷ್ಟ್ರ ಗಡಿಭಾಗದಲ್ಲಿ ಮರಾಠಾ ಅಗಸರು (ಪರೀಟರು) ಎಂಬ ಐದು ಸಂಸ್ಕೃತಿಗಳಿವೆ. ಈ ಐದು ಸಂಸ್ಕೃತಿಗಳಲ್ಲಿ ಒಟ್ಟಾರೆಯಾಗಿ ಅಂದಾಜು 48 ಉಪಪಂಗಡಗಳಿವೆ. ನಡೆ ನುಡಿ ಆಚಾರ ವಿಚಾರಗಳು, ವಿವಿಧ ಸಂಪ್ರದಾಯದ ಮಂಗಲ ಕಾರ್ಯಗಳು, ವಿವಾಹ ಸಂಬಂಧಗಳಲ್ಲಿ ವಿಭಿನ್ನವಾಗಿಯೇ ಇದ್ದಾರೆ.

ಮಡಿವಾಳ ಸಮಾಜದಲ್ಲಿ ಪ್ರದೇಶಗಳ, ಭಾಷೆಗಳ, ಸಂಸ್ಕಾರಗಳ, ನಡೆ ನುಡಿಗಳ, ಸಸ್ಯಾಹಾರಿ ಮಾಂಸಾಹಾರಿ ಬೇಧಗಳ, ಶಿಕ್ಷಿತರ ಕುಲಕಸುಬುದಾರರ ಮಧ್ಯದ ಅಂತರಗಳಿವೆ. ಈ ಅಂತರಗಳನ್ನು ಕಡಿಮೆ ಮಾಡುವಲ್ಲಿ ಪ್ರಯತ್ನಗಳು ಯಶಸ್ವಿಯಾಗುತ್ತಿವೆ.

ಸರ್ಕಾರಿ ಸೌಲಭ್ಯಗಳನ್ನು ಪಡೆಯುವ, ರಾಜಕೀಯ ಲಾಭ ಪಡೆಯುವತ್ತ ಜನರ ಗಮನ ಹೆಚ್ಚಾಗಿದೆ. ಮೂಲಭೂತ ಸೌಕರ್ಯಗಳನ್ನು ಪಡೆಯುವುದಕ್ಕಾಗಿ, ಸರ್ಕಾರಿ ಸೌಲಭ್ಯಗಳ ಮಾಹಿತಿಗಳನ್ನು ಗ್ರಾಮೀಣ ಪ್ರದೇಶದ ಕಟ್ಟಕಡೆಯ ಜನರಿಗೆ ಒದಗಿಸಬೇಕಾಗಿರುವುದು ಅತ್ಯಗತ್ಯ. ಅದಕ್ಕಾಗಿ ಸಮುದಾಯದ ಸಂಘಟನೆಗಳು ಜವಾಬ್ದಾರಿಯುತವಾಗಿ ಕಾರ್ಯನಿರ್ವಹಿಸಬೇಕಾಗಿದೆ.

ಅಂದೇ ದುಡಿದು ಅಂದೇ ಉಣ್ಣುವಂತಹ ಸ್ಥಿತಿಯಲ್ಲಿರುವ ಸಮುದಾಯದಲ್ಲಿ ಸಂಘಟನೆ ಮತ್ತು ಒಗ್ಗಟ್ಟು ಮೂಡಿಸುವುದು ಸವಾಲಿನ ಸಂಗತಿಯಾಗಿದೆ. ಬಹುದೇವೋಪಾಸನೆ, ಮೂಢನಂಬಿಕೆಗಳು ಕಂದಾಚಾರಗಳ ಆಚರಣೆ ಪ್ರಮಾಣ ಹೆಚ್ಚಿದೆ. ಜನರಲ್ಲಿ ಆಧ್ಯಾತ್ಮಿಕತೆ, ಧಾರ್ಮಿಕತೆ, ಸಾಮಾಜಿಕತೆ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಮೂಡಿಸುವುದೇ ಒಂದು ಸವಾಲಿನ ವಿಷಯವಾಗಿದೆ.

ಜನರ ಮಾನಸಿಕ ಧೋರಣೆ, ನಂಬಿಕೆಗಳು, ನಡವಳಿಕೆ ಮನಃ ಪರಿವರ್ತನೆಗೆ ವಿಶೇಷ ಪ್ರಯತ್ನಗಳಾಗಬೇಕಾಗಿದೆ. ಈ ನಿಟ್ಟಿನಲ್ಲಿ ರಂಜಾನ್ ದರ್ಗಾರವರ ಕೃತಿ "ಲಿಂಗವಂತ ಧರ್ಮದ ಸತ್ಯದರ್ಶನ" ಒಂದು ಅಮೂಲ್ಯ ಕೃತಿ. ಮಡಿವಾಳ ಸಮಾಜ ಸೇವಾ ಕಾರ್ಯಗಳಲ್ಲಿ ಸಮಾಧಾನ ತರಬಲ್ಲ ಮತ್ತು ಪರಿಹಾರಗಳನ್ನು ಒದಗಿಸಬಲ್ಲದೆಂಬ ವಿಶ್ವಾಸವಿದೆ.

ಶ್ರೀಮಠದಿಂದ ಪ್ರಕಟವಾಗುತ್ತಿರುವ ಶರಣ ರಂಜಾನ ದರ್ಗಾರವರ "ಲಿಂಗವಂತ ಸತ್ಯ ದರ್ಶನ" ಶ್ರೀಮಠದ ಆರನೆಯ ಗ್ರಂಥಪುಷ್ಪವಾಗಿದೆ. ಗ್ರಂಥಕರ್ತರಾದ ಶ್ರೀ ರಂಜಾನ ದರ್ಗಾರವರಿಗೆ ಮತ್ತು ಗ್ರಂಥ ದಾಸೋಹಿಗಳಾದ ಡಾ ಸಂಗಮೇಶ ಕಲಹಾಳ ದಂಪತಿಗಳಿಗೆ ಬಸವಾದಿ ಶರಣರು ಆರೋಗ್ಯ ಸಕಲ ಸಂಪತ್ತು ನೀಡಲಿ.

ದಿನಾಂಕ 23.04.2023 ಬಸವ ಜಯಂತಿ

# ಪ್ರಕಾಶಕರ ನುಡಿಗಳು

ಶ್ರೀ ಮಾಚಿದೇವ ಅಧ್ಯಯನ ಮತ್ತು ಸಂಶೋಧನ ಪೀಠ ಪ್ರಸಾರಾಂಗ, ಜಗದ್ಗುರು ಶ್ರೀ ಮಾಚಿದೇವ ಮಹಾಸಂಸ್ಥಾನ ಮಠ, ಮಡಿವಾಳ ಗುರುಪೀಠ, ಚಿತ್ರದುರ್ಗದಿಂದ "ಜ್ಞಾನ ದಾಸೋಹ ಮಾಲೆ 6 ನೇ ಗ್ರಂಥಪುಷ್ಪ"ವನ್ನು ಸಂತೋಷದಿಂದ ಲೋಕಾರ್ಪಣ ಮಾಡುತ್ತಿದ್ದೇವೆ.

ಶರಣ ಸಾಹಿತಿಗಳು, ಬಸವಣ್ಣನನ್ನೇ ತಮ್ಮ ಉಸಿರಾಗಿಸಿಕೊಂಡಿರುವ ಮಾನ್ಯ ಶ್ರೀ ರಂಜಾನ ದರ್ಗಾರವರು ಕಳೆದ 35 ವರ್ಷಗಳಿಂದ ಕನ್ನಡ ನಾಡು, ಭಾರತ ಮತ್ತು ವಿದೇಶಗಳ ಓದುಗರನ್ನು ಸುಲಭವಾಗಿ ಓದಿಸಿಕೊಂಡು ಹೋಗುವ ಸರಳ ಭಾಷಾ ಶೈಲಿಯಲ್ಲಿ ರಚಿಸಿರುವ ಕೃತಿಗಳು ವಿಶ್ವಾದ್ಯಂತ ಪ್ರಚಲಿತವಾಗಿವೆ. "ಲಿಂಗವಂತ ಧರ್ಮದ ಸತ್ಯ ದರ್ಶನ" ಗ್ರಂಥ ಶ್ರೀಮಠದಿಂದ ಪ್ರಕಟಗೊಳ್ಳಬೇಕೆಂಬ ಅವರ ಮತ್ತು ನಮ್ಮ ಸದಾಶಯವಾಗಿದೆ.

ಬುದ್ಧ ಧರ್ಮಿಯರಿಗೆ ಬುದ್ಧ, ಜೈನರಿಗೆ ಮಹಾವೀರ, ಇಸ್ಲಾಂರಿಗೆ ಪೈಗಂಬರ, ಶಿಖ್‌ರಿಗೆ ಗುರುನಾನಕ, ಲಿಂಗಾಯತರಿಗೆ ಬಸವಣ್ಣ, ದಲಿತರಿಗೆ ಅಂಬೇಡ್ಕರರಂಥವರು ಸಾಂಸ್ಕೃತಿಕ ನಾಯಕರಾಗಿದ್ದಾರೆ. ತಳವರ್ಗದ, ಶೋಷಿತ ವರ್ಗದ, ಸಂಪ್ರದಾಯಿಕ ಕಾಯಕ ವರ್ಗದವರಿಗೆ ಆಯಾ ಕಾಯಕ ಶರಣರು ಮತ್ತು ಬಸವಣ್ಣ ಹೀಗೆ ಇಬ್ಬಿಬ್ಬರು ಸಾಂಸ್ಕೃತಿಕ ನಾಯಕರಾಗಿದ್ದಾರೆ.

ಮಡಿವಾಳ ಕಾಯಕದವರಿಗೆ ಆ ಕಾಯಕ ಶರಣ ಮಾಚಿದೇವರು ಮತ್ತು ಬಸವಣ್ಣನವರು ಸಾಂಸ್ಕೃತಿಕ ನಾಯಕರಾಗಿದ್ದಾರೆ. ಬಸವಣ್ಣನವರ ನೇತೃತ್ವದಲ್ಲಿ ಮಾಚಿದೇವರು ಹಾಕಿಕೊಟ್ಟ ಶರಣ ಮಾರ್ಗದಲ್ಲಿ ಮಡಿವಾಳರು ನಡೆ ನುಡಿ ಹೊಂದಿದಾಗಲೇ ಆಧ್ಯಾತ್ಮಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಪ್ರಗತಿ ಸಾಧಿಸಲು ಸುಲಭಸಾಧ್ಯ !

"ಲಿಂಗವಂತ ಧರ್ಮದ ಸತ್ಯ ದರ್ಶನ" ಗ್ರಂಥ ಓದಿ, ಅರಿತು ಮತ್ತು ಆಚರಿಸಿದಾಗ, ". . . . . ತನ್ನ ತಾನರಿದು ತಾನಾರೆಂದು ತಿಳಿದೊಡೆ, ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವ" ಎಂಬ ಬಾಲಸಂಗಯ್ಯ ಶರಣರ ವಾಣಿಯಂತೆ ಮಡಿವಾಳರು ಆಚರಿಸಿದ್ದೇ ಆದಲ್ಲಿ ; ಮಾಚಿದೇವರು ಸಮಾಜದ ಅಂತರಂಗ ಬಹಿರಂಗ ಶುದ್ಧಿ ಮಾಡಿದಂತೆ ಮಡಿವಾಳರೂ ಕೂಡ, ಆಧ್ಯಾತ್ಮಿಕ,

ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಪ್ರಗತಿ ಸಾಧಿಸುವರೆಂಬ ಬಲವಾದ ನಂಬಿಕೆ ನಮ್ಮದು.

ಗ್ರಂಥಕರ್ತರಾದ ಶ್ರೀ ರಂಜಾನ ದರ್ಗಾರವರಿಗೆ ಮತ್ತು ಗ್ರಂಥ ದಾಸೋಹಿಗಳಾದ ಡಾ ಸಂಗಮೇಶ ಕಲಹಾಳ ದಂಪತಿಗಳಿಗೆ ಬಸವಾದಿ ಶರಣರು ಆಯುರಾರೋಗ್ಯ ಸುಖ ಸಂಪತ್ತುಗಳನ್ನು ಕೊಟ್ಟು ಕಾಪಾಡಲಿ.

**ಸ್ವಾಮೀಜಿಗಳವರ ಸಮಾಜ ಸುಧಾರಣಾ ಕಾರ್ಯಗಳು :**

ಡಾ ಶ್ರೀ ಬಸವ ಮಾಚಿದೇವ ಮಹಾಸ್ವಾಮೀಜಿಗಳವರು ಜೂನ 14 ರಂದು ಜಂಗಮ ದೀಕ್ಷೆ ಪಡೆದು ಮಡಿವಾಳ ಗುರುಪೀಠದ ಗುರುಗಳಾದರು. ಶ್ರೀ ಮುರುಘಾಮಠವು 3.16 ಎಕರೆ ಭೂಮಿ ನೀಡಿ, 07.06.2009 ರಂದು ನಡೆದ ಶ್ರೀಮಠದ ಶಂಕುಸ್ಥಾಪನೆ ಕಾಲಕ್ಕೆ ಸರ್ಕಾರದಿಂದ 50 ಲಕ್ಷ ಅನುದಾನ ಕೊಡಿಸಿ ಶ್ರೀಮಠದ ಅಭಿವೃದ್ಧಿಗೆ ಬುನಾದಿ ಹಾಕಿದವರು ಡಾ ಶ್ರೀ ಶಿವಮೂರ್ತಿ ಮುರುಘಾ ಶರಣರು. ಮಡಿವಾಳ ಸಮುದಾಯದ ಪ್ರಗತಿಗೆ ನಮ್ಮ ಮಠದ ಸ್ವಾಮೀಜಿಗಳಿಗೆ ಶರಣ ಸಂಸ್ಕೃತಿ ಶಿಕ್ಷಣ, ಬಸವ ತತ್ವದಲ್ಲಿ ಪದವಿ ಮಾಡಿಸಿದ್ದಾರೆ. ಮಡಿವಾಳ ಸಮುದಾಯದ ಪರಿವರ್ತನೆ ಹಾಗೂ ಪ್ರಗತಿಗಾಗಿ ಶ್ರಮಿಸುವಂತೆ ಮಾಡಿದ್ದಾರೆ. ಮಠಕ್ಕೆ ಮತ್ತು ಸ್ವಾಮೀಜಿಗಳಿಗೆ ಬೆಂಗಾವಲಾಗಿದ್ದರು.

ಡಾ ಶ್ರೀ ಬಸವ ಮಾಚಿದೇವ ಮಹಾಸ್ವಾಮಿಗಳವರು 24 ವರ್ಷಗಳಲ್ಲಿ ಕರ್ನಾಟಕದ ಹಳ್ಳಿಯಿಂದ ದಿಲ್ಲಿಯವರೆಗೆ 16 ಲಕ್ಷ ಕಿಲೋಮೀಟರಗಳಿಗೂ ಮೀರಿ ರಾಜ್ಯ ದೇಶಾದ್ಯಂತ ಸಂಚರಿಸಿ ಮಡಿವಾಳರಲ್ಲಿ ಸಂಚಲನ ಮೂಡಿಸಿದ್ದಾರೆ. ಹಿಂದಿನ ಎರಡು ತಲೆಮಾರಿನ ಇತಿಹಾಸದಲ್ಲಿ ಕಟ್ಟಕಡೆಯ ಮಡಿವಾಳರಿಗೆ ಸಿಗಬೇಕಾದ ಮೂಲಭೂತ ಸೌಕರ್ಯಗಳನ್ನು ಕೊಡಿಸುವಲ್ಲಿ ಸಕಾರಾತ್ಮಕ ಕಾರ್ಯನಿರ್ವಹಿಸಿದ್ದಾರೆ.

ಮಹಾಸ್ವಾಮಿಗಳವರು ರಾಜ್ಯದ ಅನೇಕ ಕಡೆ ದೌರ್ಜನ್ಯಕ್ಕೊಳಗಾದಾಗ ಮಡಿವಾಳರಿಗೆ ಸಾಂತ್ವಾನ ಮತ್ತು ಧನಸಹಾಯ ನೀಡಿದ್ದಾರೆ. ಶಾಸಕರು ಅಥವಾ ಸಂಬಂಧಪಟ್ಟ ಜನಪ್ರತಿನಿಧಿಗಳಿಗೆ ನಮ್ಮವರಿಗೆ ನ್ಯಾಯ ಕೊಡಿಸಲು ಕೋರಿದ್ದಾರೆ. ಸಮಾಜದ ನಾಯಕರು ಬೆಳೆಯಲು ಉತ್ತೇಜನ ನೀಡಿದ್ದಾರೆ. ಕರ್ನಾಟಕ ರಾಜ್ಯದ ಮಡಿವಾಳರಿಗೆ ಶಕ್ತಿ ತುಂಬಿದ್ದಾರೆ. ಶ್ರೀಮಠದಿಂದ ಸಮಾಜ ಬಾಂಧವರಿಗೆ ಶಕ್ತಿ ತುಂಬುವ, ಬಡವರಿಗೆ ನೊಂದವರಿಗೆ ಸಾಂತ್ವಾನ ಹೇಳುವ, ಆತ್ಮವಿಶ್ವಾಸ ಮೂಡಿಸುವ, ಧೈರ್ಯ ತುಂಬುವ, ಸಮಸ್ಯೆಗಳನ್ನು ಪರಿಹರಿಸುವ ಮತ್ತು ಎಲ್ಲರ ಜೊತೆಗಿರುವ ನೈತಿಕ ಬಲ ತುಂಬಿದ್ದಾರೆ.

**ಶ್ರೀಮಠದ ಸಾಧನೆಗಳು :**

1. ಮಡಿವಾಳರನ್ನು ಪರಿಶಿಷ್ಟ ಜಾತಿಯಲ್ಲಿ ಸೇರ್ಪಡೆಗೆ ಪ್ರತಿವರ್ಷ ಜನೇವರಿಯಲ್ಲಿ ಶ್ರೀಮಠದಲ್ಲಿ ನಡೆಯುವ ಕಾಯಕ ಜನೋತ್ಸವದಲ್ಲಿ ಸರ್ಕಾರಕ್ಕೆ ಒತ್ತಾಯಿಸಲಾಗಿದೆ.

2. ಬೆಂಗಳೂರು, ಕೂಡಲಸಂಗಮ, ಮೈಸೂರು ಹಾಗೂ ಮಂಡ್ಯಗಳಲ್ಲಿ ಬೃಹತ್ ಸಮಾವೇಶಗಳನ್ನು ನಡೆಸಿ ಅದರಲ್ಲೂ ಮಡಿವಾಳರನ್ನು ಪರಿಶಿಷ್ಟ ಜಾತಿಯಲ್ಲಿ ಸೇರ್ಪಡೆಗೆ ಸರ್ಕಾರಕ್ಕೆ ಒತ್ತಾಯಿಸಲಾಗಿದೆ.
3. ಫೆಬ್ರುವರಿ 1 ರಂದು ಸರ್ಕಾರದಿಂದ "ಶ್ರೀ ಮಡಿವಾಳ ಮಾಚಿದೇವ ಜಯಂತಿ ಆಚರಣೆ" ಮಾಡುವಂತಾಗಿದೆ.
4. ಸರ್ಕಾರ ಕರ್ನಾಟಕ ರಾಜ್ಯ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ ಸ್ಥಾಪಿಸಿದೆ.
5. ದೇವರಹಿಪ್ಪರಗಿಯಲ್ಲಿನ ಶ್ರೀ ಮಡಿವಾಳ ಮಾಚಿದೇವರ ಮೂಲ ಕ್ಷೇತ್ರಕ್ಕೆ 3 ಕೋಟಿ ಅನುದಾನ ಕೊಡಿಸಿ ಅಭಿವೃದ್ಧಿಪಡಿಸಲಾಗಿದೆ.
6. ಶ್ರೀ ಶಿವಾನಂದ. ಕಲಕೇರಿಯವರ ಪ್ರಾಯೋಜಕತ್ವದಲ್ಲಿ ಶೇ. 75 ಕ್ಕೂ ಹೆಚ್ಚು ಅಂಕ ಪಡೆದ 152 ಎಸ್.ಎಸ್.ಎಲ್.ಸಿ. ಮಕ್ಕಳಿಗೆ, 70 ಪಿ.ಯು.ಸಿ. ಮಕ್ಕಳಿಗೆ, 16 ಪದವಿ ವಿದ್ಯಾರ್ಥಿಗಳಿಗೆ ತಲಾ ರೂ. 1000/– ರಂತೆ ಗೌರವಧನ ನೀಡಿ ಪ್ರೋತ್ಸಾಹಿಸಲಾಗಿದೆ.
7. ದಿ. ಶರಣ ಶ್ರೀ. ಹೆಚ್. ಆರ್. ಕಲಕೇರಿಯವರು ಮತ್ತು ಅವರ ಪುತ್ರ ಶ್ರೀ ಶಿವಾನಂದ. ಕಲಕೇರಿಯವರ ಪ್ರಾಯೋಜಕತ್ವದಲ್ಲಿ ಮೂರು ಜನ ಕಡು ಬಡವ ವಿದ್ಯಾರ್ಥಿಗಳನ್ನು ದತ್ತು ಪಡೆದು ಅವರ ಉನ್ನತ ಶಿಕ್ಷಣಕ್ಕೆ ರೂ 7.5 ಲಕ್ಷ ಧನಸಹಾಯ ನೀಡಿ ಸಹಾಯ ಮಾಡಿದೆ. ಈ ಫಲಾನುಭವಿಗಳು ಒಳ್ಳೆಯ ಉದ್ಯೋಗ ಪಡೆದಿದ್ದಾರೆ.
8. ಡಾ ಸಂಗಮೇಶ ಕಲಹಾಳವರ ಪ್ರಾಯೋಜಕತ್ವದಲ್ಲಿ ಇಬ್ಬರು ಕಡು ಬಡವ ವಿದ್ಯಾರ್ಥಿಗಳನ್ನು ದತ್ತು ಪಡೆದು ಅವರ ಉನ್ನತ ಶಿಕ್ಷಣಕ್ಕೆ ರೂ 3.25 ಲಕ್ಷ ಧನಸಹಾಯ ನೀಡಿ ಸಹಾಯ ಮಾಡಿದೆ. ಒಬ್ಬರು ಸಾಫ್ಟವೇರ ಇಂಜಿನಿಯರ ಆಗಿ, ಇನ್ನೊಬ್ಬರು ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಫೀಲ್ಡ ಆಫೀಸರ ಆಗಿ ಉದ್ಯೋಗದಲ್ಲಿದ್ದಾರೆ.
9. ಜಿಲ್ಲಾ ರಾಜ್ಯ ರಾಷ್ಟ್ರ ಅಂತರರಾಷ್ಟ್ರೀಯ ಮಟ್ಟದ ಸಾಧಕರಿಗೆ ಮತ್ತು ಗ್ರಾಮ ಪಂಚಾಯತ ಸದಸ್ಯರಿಗೆ, ಪುರ ಹಾಗೂ ನಗರಸಭಾ ಸದಸ್ಯರಿಗೆ, ಸರ್ಕಾರದ ಉನ್ನತ ಹುದ್ದೆಗಳನ್ನು ಪಡೆದವರಿಗೆ ಹೀಗೆ 1000 ಕ್ಕೂ ಹೆಚ್ಚು ಜನರನ್ನು ಗೌರವಿಸಿ ಸನ್ಮಾನಿಸಲಾಗಿದೆ.
10. ಜೀವಮಾನ ಪರ್ಯಂತ ಸಮಾಜಕ್ಕೆ ಸೇವೆ ಸಲ್ಲಿಸಿ ಲಿಂಗೈಕ್ಯರಾದ ಮಡಿವಾಳ ಪುಣ್ಯ ಪುರುಷರ ಕುಟುಂಬಕ್ಕೆ "ವಿಶ್ವ ಆದರ್ಶ ಕುಟುಂಬ" ಪ್ರಶಸ್ತಿ ನೀಡಿ ಅವರ ಸೇವೆಯನ್ನು ಗೌರವಿಸಲಾಗಿದೆ. ಅಂತಹ ಪುಣ್ಯ ಪುರುಷರ ಜೀವನಾದರ್ಶಗಳು ಮುಂದಿನ ಪೀಳಿಗೆಗೆ ಮತ್ತು ಸಮಾಜಕ್ಕೆ ಸ್ಫೂರ್ತಿ ನೀಡುತ್ತಿವೆ.

11. ಕನ್ಯಾಕುಮಾರಿಯಿಂದ ದೆಹಲಿವರೆಗೆ "ಗಾಡಗೆಬಾಬಾ–ಮಾಚಿದೇವ–ಅಂಬೇಡ್ಕರ ಭಾರತ ಯಾತ್ರೆ' ನಡೆಸಿ ಪರಿಶಿಷ್ಟ ಜಾತಿಯಲ್ಲಿ ಮಡಿವಾಳರನ್ನು ಸೇರ್ಪಡೆಗೆ ಕೇಂದ್ರ ಸರ್ಕಾರಕ್ಕೆ ಅಹವಾಲು ತಲುಪಿಸಿದೆ.
12. ಗ್ರಾಮ, ಹೋಬಳಿ, ತಾಲೂಕಾ, ಜಿಲ್ಲಾ ಮಟ್ಟದ ಸಮಾವೇಶಗಳ ಸಂಘಟನೆ ಮಾಡಿ ಒಗ್ಗಟ್ಟಿನ ವಾತಾವರಣ ಮೂಡಿಸಲಾಗಿದೆ.
13. ಶ್ರೀ ಮಡಿವಾಳ ಮಾಚಿದೇವರನ್ನು ದೇಶಕ್ಕೆ ಪರಿಚಯಿಸಲಾಗಿ ದೇಶಾದ್ಯಂತ ಅವರನ್ನು ಪೂಜಿಸುವಂತಾಗಿದೆ.
14. ಸರ್ಕಾರದ ಧನಸಹಾಯದಿಂದ ಶ್ರೀ ಮಠವು ಅಭಿವೃದ್ಧಿಯಾಗುತ್ತಿದೆ.
15. ನಿವೇಶನಾದಿ ಆಸ್ತಿಪಟ್ಟಾ ಇತ್ಯಾದಿ ಮಡಿವಾಳ ಸಮುದಾಯದ ಮೂಲಭೂತ ಸಮಸ್ಯೆಗಳು ಪರಿಹಾರವಾಗುತ್ತಿವೆ.
16. ಮಡಿವಾಳರು ವಿವಿಧ ಸರ್ಕಾರಿ ಸೌಲಭ್ಯಗಳನ್ನು ಪಡೆಯುವಂತಾಗಿದೆ.
17. ರಾಜ್ಯಾದ್ಯಂತ ಸಮುದಾಯ ಭವನಗಳು, ಮಾಚಿದೇವ ದೇವಸ್ಥಾನಗಳು, ದೋಭಿಘಾಟಗಳು ನಿರ್ಮಾಣವಾಗಿ ಅಭಿವೃದ್ಧಿಯಾಗುತ್ತಿವೆ.
18. ರಾಜ್ಯದ ಅನೇಕ ರಸ್ತೆಗಳಿಗೆ, ಸರ್ಕಲ್‌ಗಳಿಗೆ ಶ್ರೀ ಮಾಚಿದೇವರ ಹೆಸರನ್ನು ನಾಮಕರಣ ಮಾಡಲಾಗುತ್ತಿದೆ.
19. ಜನಪ್ರತಿನಿಧಿಗಳು ಮಡಿವಾಳ ಸಮುದಾಯದವರನ್ನು ತಾವೇ ಕರೆದು ನಿವೇಶನ ಸಮುದಾಯ ಭವನ, ಮಾಚಿದೇವ ದೇವಸ್ಥಾನ ನಿರ್ಮಾಣಗಳಿಗೆ ಅನುದಾನ ಇತ್ಯಾದಿ ಸರ್ಕಾರಿ ಸೌಲಭ್ಯಗಳನ್ನು ನೀಡುವ ವಾತಾವರಣ ನಿರ್ಮಾಣವಾಗಿದೆ.
20. ಗ್ರಾಮ ಪಂಚಾಯತಿ, ತಾಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ, ಪುರಸಭೆ, ನಗರ ಸಭೆ, ವಿಧಾನ ಸಭೆ ಚುನಾವಣೆಗಳಲ್ಲಿ ಸಮಾಜದ ರಾಜಕೀಯ ಕಾರ್ಯಕರ್ತರಿಗೆ ಮುಖಂಡರಿಗೆ ಎಲ್ಲ ಪಕ್ಷದವರು ಟಿಕೇಟುಗಳನ್ನು ನೀಡುವಂತಹ ವಾತಾವರಣ ಮೂಡಿದೆ.
21. ಬೆಂಗಳೂರಿನ ಎಲ್ಲ 30 ದೋಭಿ ಘಟಗಳಲ್ಲಿ ಅಂದಾಜು 5000 ಕ್ಕೂ ಹೆಚ್ಚು ಜನರಿಗೆ ಮೂಲಭೂತ ಸೌಕರ್ಯಗಳಾದ ಬಿ.ಪಿ.ಎಲ್.ಕಾರ್ಡ, ಇಶ್ರಮ ಕಾರ್ಡ, ಆರೋಗ್ಯಕಾರ್ಡ, ಕೋವಿಡ್ ಕಾರ್ಡ, ಕಾರ್ಮಿಕ ಕಾರ್ಡ ಇತ್ಯಾದಿ ವಿವಿಧ ಸರ್ಕಾರಿ ಸೌಲಭ್ಯಗಳ ಅಗತ್ಯ ಕಾರ್ಡಗಳನ್ನು ಮಾಡಿಸುವ ಕಾರ್ಯ ಜನರ ಮನೆ ಬಾಗಿಲಿಗೆ ತಲುಪಿದೆ.
22. ಶ್ರೀಮಠದ ಪ್ರಸಾರಾಂಗದಿಂದ ಶ್ರೀ ಮಾಚಿದೇವ ಪ್ರಕಾಶ, ಪರಿಚಯ ಪ್ರಭಾ, ಸಂಸ್ಕಾರ ಸಾಧನ, ಆರೋಗ್ಯವೇ ಜೀವ ಸಂಜೀವಿನಿ, ಮಾಚಿದೇವ ಅನುಸಂಧಾನ ಗ್ರಂಥಗಳನ್ನು ಪ್ರಕಟಿಸಲಾಗಿದೆ.

23. ಮನುಕುಲದ ಮಹಾತ್ಮರು ಗ್ರಂಥ (ಮಾಚಿದೇವ, ಮಲ್ಲಿಗೆಮ್ಮ, ಗಾಡಗೆಬಾಬಾ, ಚಾಕಲಿ ಐಲಮ್ಮ ಮತ್ತು ತೊಂಡ ನಯನಾರರವರ ಸಂಕ್ಷಿಪ್ತ ಜೀವನ ಚರಿತ್ರೆ) ಮತ್ತು ಮನುಕುಲದ ಪುಣ್ಯ ಪುರುಷರು (ಜೀವಮಾನವಿಡೀ ಮಡಿವಾಳ ಸಮುದಾಯ ಸೇವೆ ಮಾಡಿ ಲಿಂಗೈಕ್ಯರಾದ 38 ಜನ ಮಡಿವಾಳ ಸಮುದಾಯದ ಸಮಾಜಸೇವಕರ ಪರಿಚಯ) ಗ್ರಂಥ ಅಚ್ಚಿನಲ್ಲಿದ್ದು ಶೀಘ್ರದಲ್ಲಿ ಬಿಡುಗಡೆಯಾಗಲಿವೆ.
24. ತಿಪಟೂರು ತಾಲೂಕಿನಲ್ಲಿ ನಿರಂತರ ಎಂಟು ವರ್ಷದಿಂದ ಗ್ರಾಮದರ್ಶನದ ಮೂಲಕ ಕಟ್ಟಕಡೆಯ ಹಳ್ಳಿಯವರಗೆ ಜನಜಾಗೃತಿ ಮೂಡಿಸಿದೆ.
25. ಬೆಂಗಳೂರು ನಗರದಲ್ಲಿ 2013 ಶ್ರಾವಣಮಾಸದಲ್ಲಿ, ಬೆಂಗಳೂರಿನ 30 ದೋಭಿಘಾಟಗಳಲ್ಲಿ 2021 ರ ಕಾರ್ತಿಕ ಮಾಸದಲ್ಲಿ, ಚಿತ್ರದುರ್ಗ ಜಿಲ್ಲೆಯಾದ್ಯಂತ 80 ಕ್ಕೂ ಹೆಚ್ಚು ಹಳ್ಳಿಗಳಲ್ಲಿ 2021 ಶ್ರಾವಣ ಮಾಸದಲ್ಲಿ ಒಂದು ತಿಂಗಳ ಪರ್ಯಂತ "ಮಾಚಿದೇವ ಬೆಳಕು" ಕಾರ್ಯಕ್ರಮಗಳ ಮೂಲಕ ಆಧ್ಯಾತ್ಮಿಕ, ಧಾರ್ಮಿಕ ಮತ್ತು ಮಾಚಿದೇವರ ಜೀವನ ಮೌಲ್ಯಗಳನ್ನು ಪರಿಚಯಿಸುವ ಮೂಲಕ ಜಾಗೃತಿ ಮೂಡಿಸಲಾಗಿದೆ.
26. ಶ್ರೀಮಠದಲ್ಲಿ 2017 ಮತ್ತು 2021 ರಲ್ಲಿ ಮಡಿವಾಳ ಸಮಾಜ ಸೇವಕರಿಗೆ "ವ್ಯಕ್ತಿತ್ವ ವಿಕಸನ ತರಬೇತಿ ಕಾರ್ಯಾಗಾರ" ಏರ್ಪಡಿಸಿ 200 ಕ್ಕೂ ಹೆಚ್ಚು ಸಮರ್ಥ ಸಮಾಜಸೇವಕರನ್ನಾಗಿ ರೂಪಿಸಲಾಗಿದೆ.

**ಶ್ರೀ ಮಂಜುನಾಥ ಎ. ಆರ್.**
ಧರ್ಮದರ್ಶಿಗಳು,
ಜಗದ್ಗುರು ಶ್ರೀ ಮಾಚಿದೇವ ಮಹಾಸಂಸ್ಥಾನ ಮಠ, ಮಡಿವಾಳ ಗುರುಪೀಠ,
ಚಿತ್ರದುರ್ಗ ದಿನಾಂಕ 23.04.2023 ಬಸವ ಜಯಂತಿ

---

ಎನ್ನ ಕಾಯವ ಶುದ್ಧವ ಮಾಡಿದಾತ ಮಡಿವಾಳ
ಎನ್ನ ಮನವ ನಿರ್ಮಲವ ಮಾಡಿದಾತ ಮಡಿವಾಳ
ಎನ್ನಂತರಂಗವ ಬೆಳಗಿದಾತ ಮಡಿವಾಳ
ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ. ಕೂಡಲಸಂಗಮದೇವಾ
ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ. **– ಬಸವಣ್ಣನವರು**

ನಿತ್ಯ ಸತ್ಯದೊಳಡಗಿ, ಸತ್ಯ ಸದಾಚಾರದೊಳಡಗಿ,
ಸದಾಚಾರ ಅನುಭಾವದೊಳಡಗಿ, ಅನುಭಾವ ಜ್ಞಾನದೊಳಡಗಿ,
ಮಹಾಜ್ಞಾನ ಮನೋಲಯದೊಳಡಗಿ, ಮನೋಲಯವೇ ಮಹಾಘನವಾಯಿತ್ತು,
ಕಲಿದೇವರದೇವಾ ನಿಮ್ಮ ನಿಜೈಕ್ಯವು. **– ಮಾಚಿದೇವರು**

# ಗ್ರಂಥ ದಾಸೋಹಿ ಡಾ ಸಂಗಮೇಶ ಮ. ಕಲಹಾಳ ಕುಟುಂಬ

1960 ಮೇ 19 ರಂದು ಜನಿಸಿದ ಡಾ ಸಂಗಮೇಶ ಮ. ಕಲಹಾಳ ಅವರು ಎಂ. ಡಿ ಆಯುರ್ವೇದ ಸ್ನಾತಕೋತ್ತರ ಪದವೀಧರರು. ನಿವೃತ್ತ ಜಿಲ್ಲಾ ಆಯುಷ್ ಆರೋಗ್ಯಾಧಿಕಾರಿ ಆಗಿರುವ ಇವರು ಕೊಪ್ಪಳದಲ್ಲಿ ವಾಸವಾಗಿದ್ದಾರೆ. 1999 ರಿಂದ 2004 ರವರೆಗೆ ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿಯ ಸದಸ್ಯರಾಗಿ ಮತ್ತು 2004 ರಿಂದ 2006 ರವರೆಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕೊಪ್ಪಳ ಜಿಲ್ಲಾ ಕನ್ನಡ ಜಾಗೃತಿ ಸಮಿತಿಯ ಕರ್ನಾಟಕ ಸರ್ಕಾರದ ನಾಮಕರಣ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

**ಶಿಕ್ಷಣ ಶಕ್ತಿಯ ಪ್ರತೀಕ ಕಲಹಾಳ ಕುಟುಂಬ :** ರಾಮದುರ್ಗ ತಾಲೂಕಿನ ಕಲಹಾಳ ಗ್ರಾಮದ ಇವರ ಅಜ್ಜ ದಿ. ಹನಮಪ್ಪನವರು ಹಾಗೂ ಅಜ್ಜಿ ದಿ. ನೀಲಮ್ಮ ದಂಪತಿ ಮಡಿವಾಳ ಕುಲಕಸುಬು ಮಾಡುತ್ತ ಬಡತನದಲ್ಲಿ ತಮ್ಮ 9 ಗಂಡು 2 ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸಿ ಇಡೀ ಕಲಹಾಳ ಕುಟುಂಬ ಶಿಕ್ಷಿತರಾಗಲು ಭದ್ರ ಬುನಾದಿ ಹಾಕಿದವರು. ಇದರಿಂದಾಗಿ ಕಲಹಾಳ ಕುಟುಂಬದಲ್ಲಿ ನೂರಾರು ಜನ ಶಿಕ್ಷಕ ಶಿಕ್ಷಕಿಯರು, ವೈದ್ಯರು, ಇಂಜಿನಿಯರುಗಳು, ಅಧಿಕಾರಿಗಳು ಇದ್ದು ಆಲದಮರದಂತಹ ಒಂದು ಸುಶಿಕ್ಷಿತ ಕುಟುಂಬವಾಗಿದೆ.

ಡಾ ಸಂಗಮೇಶವರ ತಂದೆ, ತಾಯಿ ಮತ್ತು ಅಣ್ಣ ಪಿಯುಸಿಯಿಂದ ಪದವಿವರೆಗೆ ಸಹಪಾಠಿಗಳಾಗಿ ಓದಿದ್ದು ಅನನ್ಯ ಉದಾಹರಣೆಯಾಗಿದೆ. ಇತಿಹಾಸದಲ್ಲಿ ಮತ್ತು ಭವಿಷ್ಯದಲ್ಲಿ ಬಹುಶಃ ಇದೊಂದು ಅಮೂಲ್ಯ ದಾಖಲೆ.

ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ಇಲಾಖೆ ಆಯುಕ್ತರಾದ ಐಆರ್‌ಎಸ್ ಅಧಿಕಾರಿ ಶಿವಾನಂದ ಕಲಕೇರಿಯವರು ಡಾ ಸಂಗಮೇಶರವರ ಹಿರಿಯಕ್ಕ ಗಿರಿಜಾದೇವಿ ಹಾಗೂ ಹನಮಂತರಾಯ ಕಲಕೇರಿ ದಂಪತಿಗಳ ಪುತ್ರ ಮತ್ತು ಕಲಹಾಳ ಕುಟುಂಬದ ಹೆಮ್ಮೆಯ ಮೊಮ್ಮಗರಾಗಿದ್ದಾರೆ.

ಸಂಗಮೇಶ ಅವರ ತಾಯಿ ಪಾರ್ವತಮ್ಮನವರು ಒಂದು ವರ್ಷದ ಮಗು ಇದ್ದಾಗಲೇ ಅವರ ತಂದೆ ತೀರಿಕೊಂಡರು. ಅವರ ತಾಯಿ ಕೂಡಲಸಂಗಮದ ಕೆಂಗಲ್ಲ ದಿ ನೀಲಮ್ಮನವರು ಎದೆಗುಂದದೇ ಮಗಳನ್ನು ಓದಿಸಿ ಕರ್ನಾಟಕದ ಪ್ರಥಮ ಮಡಿವಾಳ ಶಿಕ್ಷಕಿಯನ್ನಾಗಿ ಮಾಡಿದ್ದು ದಾಖಲೆಯಾಗಿದೆ.

**ಕುಟುಂಬ :** ಡಾ ಸಂಗಮೇಶರವರು ಲಿಂಗೈಕ್ಯ ಕಲಹಾಳ ಮಡಿವಾಳಪ್ಪನವರು ಮತ್ತು ಲಿಂಗೈಕ್ಯ ಪಾರ್ವತಮ್ಮನವರು ದಂಪತಿಗಳ ಸುಪುತ್ರರು. ಹಿರಿಯಣ್ಣ ಮೋಹನ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿ. ಹಿರಿಯಕ್ಕ ಗಿರಿಜಾದೇವಿ,

ನಂತರದ ಅಕ್ಕ ಅಕ್ಕಮಹಾದೇವಿ ಮತ್ತು ಒಬ್ಬ ತಂಗಿ ರೇಣುಕಾದೇವಿ ಹೈಸ್ಕೂಲ್ ಶಿಕ್ಷಕಿಯರು. ಇನ್ನೊಬ್ಬ ತಂಗಿ ಸರ್ವಮಂಗಳಾ ಪ್ರಾಥಮಿಕ ಶಾಲಾ ಶಿಕ್ಷಕಿ. ಒಂದನೇ ಮಾವ ಹೆಚ್.ಆರ್.ಕಲಕೇರಿಯವರು ಮತ್ತು ಎರಡನೇ ಮಾವ ಬಿ.ಆರ್.ಕಳಕಪ್ಪನವರು ಹೈಸ್ಕೂಲ್ ಶಿಕ್ಷಕರು. ಮೂರನೇ ಮಾವ ಛತ್ರಪ್ಪ ನಾಗಲಾಪೂರವರು ತಹಸೀಲದಾರರು. ಕೊನೆಯ ತಂಗಿಯ ಪತಿ ಜಗದೀಶ ರೋಣರವರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು.

ಪತ್ನಿ ಸರೋಜಿನಿ ಸರ್ಕಾರಿ ಶಾಲಾಶಿಕ್ಷಕಿ. 1 ನೇ ಪುತ್ರಿ "ಓಂಶ್ರೀ" ಎಂ.ಎ, ಬಿ.ಎಡ್., ಡಿಪ್ಲೋಮಾ ಜರ್ನ್ಯಾಲಿಜಂ ಓದಿದ್ದು ಗೃಹಿಣಿ. ಇವರ ಪತಿ ಡಾ ರಾಮಚಂದ್ರ ಹೊಸಳ್ಳಿ ತೋಟಗಾರಿಕೆ ಉಪನಿರ್ದೇಶಕರು. 2 ನೇ ಪುತ್ರಿ "ನಮಃಶ್ರೀ" ಬಿ.ಎ, ಬಿ.ಎಡ್. ಪದವೀಧರೆಯಾಗಿದ್ದು ಗೃಹಿಣಿ. ಏಕೈಕ ಪುತ್ರ "ಶಿವಾಯಶ್ರೀ" ತೈವಾನ ದೇಶದಲ್ಲಿ ಪಿ.ಹೆಚ್.ಡಿ.ಹಾರ್ಟಿಕಲ್ಚರ್ ವ್ಯಾಸಂಗ ಮಾಡುತ್ತಿದ್ದಾರೆ.

**ತಂದೆಯ ಆದರ್ಶ :** ತಂದೆ ಮಡಿವಾಳಪ್ಪನವರು ಸ್ವಾತಂತ್ರ್ಯ ಚಳುವಳಿಗಾರರಾಗಿದ್ದರು. ಗಾಂಧೀಜಿ ಮತ್ತು ವಿನೋಬಾ ಭಾವೆಯವರ ಅನುಯಾಯಿಗಳು, ಸರ್ವೋದಯ ಕಾರ್ಯಕರ್ತರು, ಆದರ್ಶ ಶಿಕ್ಷಕ ರಾಜ್ಯ ಪ್ರಶಸ್ತಿ ವಿಜೇತರು, ಹಿಂದಿ ಮತ್ತು ಕನ್ನಡ ಭಾಷಾ ಪ್ರಚಾರಕರು, ಶಾಲಾ ಪಠ್ಯಪುಸ್ತಕ ರಚನಕಾರರು ಮತ್ತು ಶಿಕ್ಷಣ ತಜ್ಞರಾಗಿದ್ದರು. ಇವರ ಮನೆಯೇ ಗ್ರಂಥಾಲಯವಾಗಿತ್ತು. ಜೀವಮಾನವಿಡೀ ಅಧ್ಯಯನ, ಶೋಧನೆ, ಬೋಧನೆಗಳೇ ಜೀವನದುಸಿರಾಗಿತ್ತು. ಗಾಂಧೀಜಿ ಮತ್ತು ವಿನೋಬಾ ಭಾವೆಯವರ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಕರ್ನಾಟಕದ ಗಾಂಧೀ ನೀಲಕಂಠಜೀಯವರ ನೇತೃತ್ವದ "ಸರ್ವೋದಯ ಸಾಹಿತ್ಯ ಮಾಲೆ" ಮುಖಾಂತರ ಪ್ರಕಟಿಸಿದ್ದಾರೆ. ಶಿಕ್ಷಣವೇ ಮಾನವ ಉನ್ನತಿಗೆ ಕಾರಣ. ವಿಶ್ವದ ಎಲ್ಲ ಜೀವಿಗಳ ಬೆಲೆ ಒಂದೇ ಆಗಿದೆ. ಪ್ರಕೃತಿ ನಿಯಮವೇ ಧರ್ಮ. "ಜೈ ಜಗತ್" ಇವು ಅವರ ನಿತ್ಯ ಮಂತ್ರಗಳಾಗಿದ್ದವು.

ಸಂಗಮೇಶ ಅವರು ಬುದ್ಧ, ಬಸವ ಮಾಚಿದೇವ, ಅಂಬೇಡ್ಕರ್, ಗಾಂಧೀಜಿ, ವಿನೋಬಾಜಿ, ಗಾಡಗೆ ಬಾಬಾ, ಪೆರಿಯಾರ, ಚಾಕಲಿ ಐಲಮ್ಮ ಮುಂತಾದ ಮಹಾಪುರುಷರಿಂದ ಪ್ರಭಾವಿತರಾಗಿದ್ದು ಅವರ ಕುರಿತಾದ ಲೇಖನ, ಕಿರುಪುಸ್ತಕಗಳನ್ನು ಮುದ್ರಿಸಿ ಸಮಾಜದಲ್ಲಿ ಪ್ರಸಾರ ಮಾಡುವುದನ್ನು ಹವ್ಯಾಸ ಮಾಡಿಕೊಂಡಿದ್ದಾರೆ. ಬಸವಾದಿ ಶರಣರ ತತ್ವ ಸಿದ್ಧಾಂತಗಳನ್ನು ಸ್ವತಃ ಪಾಲಿಸುವುದು ಮತ್ತು ಬಸವ ಬಳಗಗಳ ಮೂಲಕ ಉಪನ್ಯಾಸ, ಕಾರ್ಯಾಗಾರ, ಪ್ರಾತ್ಯಕ್ಷಿಕೆಗಳ ಮೂಲಕ ಪ್ರಸಾರ ಮಾಡುತ್ತ ಬಂದಿದ್ದಾರೆ.

**ಆಯುಷ್ ವೈದ್ಯಕೀಯ ಕ್ಷೇತ್ರ :** ಇವರ ಅಧಿಕಾರಾವಧಿಯಲ್ಲಿ ನಡೆದ 'ಶಾಲಾ ಶಿಕ್ಷಕರಿಗೆ ಯೋಗ ತರಬೇತಿ', 'ಸಿದ್ಧಯೋಗ' ಮತ್ತು 'ಅಪೌಷ್ಟಿಕ ಮಕ್ಕಳಿಗೆ ಆಯುಷ್ ಪುಷ್ಟಿ ಬಿಸ್ಕತ್ತು' ಈ ಮೂರು ಪ್ರಾಯೋಗಿಕ (Pilot Study)

ಕಾರ್ಯಕ್ರಮಗಳ ಅಧ್ಯಯನದ ಯಶಸ್ಸಿನಿಂದಾಗಿ ಮೂರೂ ಕಾರ್ಯಕ್ರಮಗಳನ್ನು ರಾಜ್ಯಾದ್ಯಂತ ಸರ್ಕಾರ ಅನುಷ್ಠಾನಗೊಳಿಸಿದ್ದು, ಅವರ ಹೆಜ್ಜೆಗುರುತಿನ ಸೇವೆಗಳಾಗಿವೆ.

**ಸರ್ಕಾರಿ ಆಯುಷ್ ಇಲಾಖೆ ಸೇವೆಯ ಫಲಶ್ರುತಿಗಳು :** ಬಾಗಲಕೋಟ ಜಿಲ್ಲೆಯೊಂದರಲ್ಲಿಯೇ 48 ಹೊಸ ಆಯುಷ್ ಆಸ್ಪತ್ರೆ ತೆರೆಯಲು ಬೇಡಿಕೆ ಬಂದು, ಬಾಗಲಕೋಟೆ ಆಸ್ಪತ್ರೆಯಲ್ಲಿ 12000 ಕ್ಕೂ ಹೆಚ್ಚು ಪಂಚಕರ್ಮ ಚಿಕಿತ್ಸಾ ವಿಧಾನಗಳ ಚಿಕಿತ್ಸೆ ನೀಡಿ, ಧಾರವಾಡದಲ್ಲಿ ಕೋವಿಡ್ ಸಮಯದಲ್ಲಿ 494000 ಜನರಿಗೆ ಕೊವಿಡ್ ಮುಂಜಾಗ್ರತಾ ಹೋಮಿಯೋಪತಿ ಔಷಧಿ ವಿತರಿಸಿ ಆಯುಷ್ ಪದ್ಧತಿಗಳ ಜನಪ್ರಿಯತೆ ಮತ್ತು ಚಿಕಿತ್ಸೆಗೆ ಸಾರ್ವಜನಿಕ ಬೇಡಿಕೆಯನ್ನು ಹೆಚ್ಚಿಸಿದ್ದಾರೆ. ಆಯುಷ್ ಇಲಾಖೆಯ ಒಬ್ಬ ದಕ್ಷ, ಪ್ರಾಮಾಣಿಕ ಅಧಿಕಾರಿಯಾಗಿದ್ದಾರೆ.

**ಮಡಿವಾಳ ಸಮುದಾಯ ಸೇವೆ :**

**ಉತ್ತರ ಕರ್ನಾಟಕ ಮಡಿವಾಳರ ಸಂಘ :** 1982 ರಿಂದ ಎಂ.ಎಲ್.ಭೋಸಲೆಯವರ ನೇತೃತ್ವದಲ್ಲಿ ಉತ್ತರ ಕರ್ನಾಟಕ ಮಡಿವಾಳರ ಸಂಘದ ಯುವಪ್ರತಿನಿಧಿಯಾಗಿ ಮನೆ ಮನೆಗೆ, ಹಳ್ಳಿ ಹಳ್ಳಿಗೆ ಹೋಗಿ ಮಡಿವಾಳರ ಸ್ಥಿತಿಗತಿಗಳ ಅಧ್ಯಯನ ಮತ್ತು ಸಂಘಟನೆ ಮಾಡಿದ್ದಾರೆ.

**ಶ್ರೀ ಮಡಿವಾಳ ಮಾಚಿದೇವ ಕಲ್ಯಾಣ ಕೇಂದ್ರ ದೇವರಹಿಪ್ಪರಗಿ :** ಲಿಂಗೈಕ್ಯ ಹೆಚ್.ಆರ್.ಕಲಕೇರಿಯವರ ನೇತೃತ್ವದಲ್ಲಿ ದಿನಾಂಕ 11.03.1987 ರಂದು ಬಿಜಾಪೂರ ಜಿಲ್ಲೆ ಸಿಂದಗಿ ತಾಲೂಕಿನ ದೇವರಹಿಪ್ಪರಗಿಯಲ್ಲಿ ಶ್ರೀ ಮಡಿವಾಳ ಮಾಚಿದೇವ ಕಲ್ಯಾಣ ಕೇಂದ್ರ ಸ್ಥಾಪನೆ, ಮಾಚಿದೇವರ ಜನ್ಮ ಹಾಗೂ ಐಕ್ಯ ಸ್ಥಳಗಳ ದುರಸ್ತಿ, ಮಾಚಿದೇವರ ದೇವಸ್ಥಾನದ ಗದ್ದುಗೆ ಮೇಲೆ ಮಾಚಿದೇವರ ಅಮೃತಶಿಲೆಯ ಮೂರ್ತಿ ಮತ್ತು ಮಡಿವಾಳೇಶ್ವರ ಮಠದಲ್ಲಿ ಅಮೃತಶಿಲೆಯ ಮಾಚಿದೇವ-ಮಲ್ಲಿಗೆಮ್ಮನವರ ನಿಂತ ಮೂರ್ತಿಗಳ ಸ್ಥಾಪನೆ ಮಾಡಲಾಗಿದೆ.

ಕಲ್ಯಾಣ ಕೇಂದ್ರದ ಮೂಲಕ ಮಡಿವಾಳರ ಕುಲದೇವರು ಮಾಚಿದೇವ. ಮಾಚಿದೇವರ ಜನ್ಮಸ್ಥಳ ಐಕ್ಯಸ್ಥಳ ಹಾಗೂ ಮಡಿವಾಳರ ಧರ್ಮಕ್ಷೇತ್ರ ದೇವರಹಿಪ್ಪರಗಿ, ವರ್ಷಕ್ಕೊಮ್ಮೆ ದೇವರಹಿಪ್ಪರಗಿಗೆ ಹೋಗಿಬನ್ನಿರಿ ಎಂದು ರಾಜ್ಯಾದ್ಯಂತ ಜನರಲ್ಲಿ ಜಾಗೃತಿ ಮೂಡಿಸಲಾಯಿತು. ಮಾಚಿದೇವ ಮಹಿಮೆಯ ಒಂದು ಲಕ್ಷಕ್ಕೂ ಹೆಚ್ಚು ಫೋಟೋಗಳನ್ನು ವಿತರಿಸಲಾಯಿತು.

**ಮಾಚಿದೇವ ಅಧ್ಯಯನ ಪೀಠ ದೇವರಹಿಪ್ಪರಗಿ :** ಶ್ರೀ ಬಸವಂತಪ್ಪ ಮಡಿವಾಳರ ಇವರ ನೇತೃತ್ವದಲ್ಲಿ ಕಲ್ಯಾಣ ಕೇಂದ್ರದ ಅಡಿಯಲ್ಲಿ ಸ್ಥಾಪಿಸಲಾದ ಅಧ್ಯಯನ ಪೀಠದ ಮೂಲಕ ಪಂಡಿತ ನಂಜುಂಡಯ್ಯನವರಿಂದ ರಚಿತವಾದ "ಮಾಚಿದೇವ ಪುರಾಣ" ಗ್ರಂಥವನ್ನು ಪ್ರಕಟಣೆ ಮಾಡಲಾಗಿದೆ. ನಂಜುಂಡಯ್ಯನವರು ಸಂಪಾದಿಸಲ್ಪಟ್ಟ ಮಾಚಿದೇವರ ವಚನಗಳ ಹಸ್ತಪ್ರತಿ ಕೇಂದ್ರಕ್ಕೆ ನೀಡಿದ್ದು, ಅದಕ್ಕೆ

ಭಾವಾರ್ಥ ಬರೆಸಿ ಇಡಲಾಗಿದ್ದು ಪ್ರಕಟವಾಗಲಿದೆ. ಕಲ್ಯಾಣ ಕೇಂದ್ರದಿಂದ ಮಡಿವಾಳ ಸಮುದಾಯವನ್ನು ಪರಿಶಿಷ್ಟ ಜಾತಿಯಲ್ಲಿ ಸೇರ್ಪಡೆಗಾಗಿ ಮತ್ತು ಮಡಿವಾಳರ ಅಭಿವೃದ್ಧಿ ನಿಗಮ ಸ್ಥಾಪಿಸುವಂತೆ ಮನವಿ ಮಾಡುತ್ತ ಬಂದಿದ್ದಾರೆ.

**ಕರ್ನಾಟಕ ರಾಜ್ಯ ಮಡಿವಾಳರ ಸಂಘ :** ರಾಜ್ಯ ಸಂಘದ ಮಾರ್ಗದರ್ಶಕರಾಗಿ 1996 ರಿಂದ 2009ರ ವರೆಗೆ ಕಾರ್ಯನಿರ್ವಹಿಸಿದ್ದಾರೆ. ರಾಜ್ಯ ಸಂಘದ ಮಹಾತ್ವಾಕಾಂಕ್ಷಿ ಯೋಜನೆಯಾದ "ಮಡಿವಾಳ ಜನಾಂಗೀಯ ಸಮೀಕ್ಷೆ 2002-2005" ಇದಕ್ಕೆ ಇವರನ್ನು ರಾಜ್ಯ ನಿರ್ದೇಶಕರನ್ನಾಗಿ ನೇಮಿಸಿ ಜವಾಬ್ದಾರಿ ನೀಡಲಾಯಿತು. ಸಮೀಕ್ಷೆ ನಡೆಸಿ 01.04.2005 ರಲ್ಲಿ ವರದಿ ಸಲ್ಲಿಸಲಾಯಿತು. ಈ ಜನಾಂಗೀಯ ಅಧ್ಯಯನ ಐತಿಹಾಸಿಕ ದಾಖಲೆಯಾಗಿ ಉಳಿದಿದೆ.

**ಬೆಂಗಳೂರಿನಲ್ಲಿ ಗುರುಪೀಠ :** 1999 ರಲ್ಲಿ ಕರ್ನಾಟಕ ರಾಜ್ಯ ಮಡಿವಾಳರ ಸಂಘದಿಂದ ಬೆಂಗಳೂರಲ್ಲಿ ಶ್ರೀ ಮಾಚಿದೇವ ಗುರುಪೀಠ ಸ್ಥಾಪಕ ಟ್ರಸ್ಟಿಯಾಗಿ, ಗುರುಪೀಠದ ನಿಯಮ ನಿಬಂಧನೆಗಳನ್ನು ರಚಿಸಿದ್ದಾರೆ. 14.05.2022 ರಂದು ಶ್ರೀ ಮಾಚಿದೇವ ಮೋಹನರಾಮ ಸ್ವಾಮೀಜಿಯವರ ಪೀಠಾರೋಹಣವಾಯಿತು. ಸದರಿ ಸ್ವಾಮೀಜಿಯವರೊಂದಿಗೆ ಕೆಲದಿನ ಕಾರ್ಯನಿರ್ವಹಿಸಿದ್ದಾರೆ.

**ಡಾ ಅನ್ನಪೂರ್ಣಮ್ಮನವರ ವರದಿ :** 2009-10 ರಲ್ಲಿ ರಾಜ್ಯ ಸಂಘದಿಂದ ರಾಜ್ಯಾದ್ಯಂತ ತಾಲೂಕುವಾರು ಮಾಹಿತಿಗಳನ್ನು ಸಂಗ್ರಹಿಸಿ, 2002-2005 ರ ಜನಾಂಗೀಯ ಅಧ್ಯಯನದ ಸಮಗ್ರ ಮಾಹಿತಿಗಳನ್ನು, ವಿಡಿಯೋಗಳನ್ನು, ಫೋಟೋಗಳನ್ನು ಡಾ ಅನ್ನಪೂರ್ಣಮ್ಮನವರಿಗೆ ರಾಜ್ಯ ಸಂಘದ ಅಧ್ಯಕ್ಷ ಬಾಲಕೃಷ್ಣಪ್ಪನವರೊಂದಿಗೆ ನೀಡಿ, ವರದಿ ತಯಾರಿಸುವಲ್ಲಿ ಮಹತ್ವದ ಕಾರ್ಯದಲ್ಲಿ ಭಾಗಿಯಾಗಿದ್ದಾರೆ.

**ಶ್ರೀ ಮಾಚಿದೇವ ಮಹಾಸಂಸ್ಥಾನ ಮಠ ಚಿತ್ರದುರ್ಗ ಮೂಲಕ ಸಮಾಜ ಸೇವೆ :** 2002 ರಿಂದ ಶ್ರೀ ಬಸವಮಾಚಿದೇವ ಮಹಾಸ್ವಾಮಿಗಳವರೊಂದಿಗೆ ಜತೆಗೂಡಿ ಅವರೊಂದಿಗೆ ಸಮಾಜ ಸೇವಾ ಕಾರ್ಯಗಳಲ್ಲಿ ತೊಡಗಿದ್ದಾರೆ. 2019 ರಲ್ಲಿ ಮಠದ ಶಂಕುಸ್ಥಾಪನೆ ಮತ್ತು ಸ್ವಾಮೀಜಿಯವರ ಪಟ್ಟಾಧಿಕಾರ ಮಹೋತ್ಸವದ ಮಹಾಸಮ್ಮೇಳನ ಸಂಘಟಿಸಿದ್ದಾರೆ. 2020 ರಿಂದ ಪ್ರತಿ ವರ್ಷ ಜನವರಿಯಲ್ಲಿ ಕಾಯಕ ಜನೋತ್ಸವ ಸಂಘಟಿಸುತ್ತ ಬಂದಿದ್ದಾರೆ. ಬಡಮಕ್ಕಳ ಕಲ್ಯಾಣ ನಿಧಿಗಳ ಸ್ಥಾಪನೆ ಮಾಡಿ ಬಡಮಕ್ಕಳ ಶಿಕ್ಷಣಕ್ಕೆ ಸಹಾಯ. ಯುವಕ ಯವಕರಿಗೆ ವ್ಯಕ್ತಿತ್ವ ವಿಕಾಸ ತರಬೇತಿ. ಮಾಚಿದೇವ ಅರಿವು ಆಚಾರ ಅನುಭಾವ ಮಾಸಿಕ ಕಾರ್ಯಕ್ರಮ. ಸಮಾಜದ ಅಭಿವೃದ್ಧಿಗೆ ಶ್ರಮಿಸಿದ ಸೇವಕರಿಗೆ ಸನ್ಮಾನ. ಸಮಾಜದ 38 ಜನ ಪುಣ್ಯಪುರುಷರಿಗೆ ವಿಶ್ವ ಆದರ್ಶ ಕುಟುಂಬ ಪ್ರಶಸ್ತಿ. ವಿದ್ಯಾರ್ಥಿಗಳ ಪ್ರತಿಭಾ ಪುರಸ್ಕಾರ. ವಧುವರರ ಸಮಾವೇಶ ಮತ್ತು ಮಠದ ವಾಟ್ಸಪ್ ಗುಂಪಿನ ಮೂಲಕ

ವಧುವರರ ಮಾಹಿತಿ ಪ್ರಸಾರ. ಸರಳ ಸಾಮೂಹಿಕ ವಿವಾಹಗಳ ಏರ್ಪಾಡು. ಸೈನಿಕರು, ಸ್ವಾತಂತ್ರ್ಯ ಹೋರಾಟಗಾರರು, ವಿವಿಧ ಕ್ಷೇತ್ರದಲ್ಲಿ ಸಾಧನೆ ಮಾಡಿದ ಸಾಧಕರಿಗೆ ಸನ್ಮಾನ. ಪರಿಶಿಷ್ಟ ಜಾತಿಗೆ ಸೇರ್ಪಡೆಗೆ ನಿರಂತರ ಪ್ರಯತ್ನಗಳು. ಶ್ರೀಮಠದ ಕಚೇರಿ ನಿರ್ವಹಣೆ ಅಭಿವೃದ್ಧಿ ಕಾರ್ಯಗಳ ನಿರ್ವಹಣೆ. ತಮ್ಮ ನಿವೃತ್ತಿ ಹಣದಲ್ಲಿ ತಮ್ಮ ಪತ್ನಿ ಹಾಗೂ ಮಕ್ಕಳಿಗೆ ನೀಡಿದಷ್ಟೇ ಸಮಪಾಲನ್ನು ಶ್ರೀಮಠಕ್ಕೆ ದಾಸೋಹ ಮಾಡಿದ್ದಾರೆ. ಅನೇಕ ಬಡಮಕ್ಕಳ ಉನ್ನತ ವ್ಯಾಸಂಗಕ್ಕೆ ಧನ ಸಹಾಯ ಮಾಡಿದ್ದಾರೆ. ಪಾರಂಪರಿಕ ಔಷಧಿಗಳ ಸಂಶೋಧನೆಯಲ್ಲಿ ತೊಡಗಿದ್ದಾರೆ. ಜನಪದೀಯ ಔಷಧಿಗಳು, ಆಯಷ್ಯ ಸಿಂಚನ, ಮಡಿವಾಳ ಮಾಚಿದೇವ ಜೀವನ ಚರಿತ್ರೆ ಮುಂತಾದ ಏಳು ಕಿರು ಪುಸ್ತಕಗಳನ್ನು ರಚಿಸಿದ್ದಾರೆ.

**ಪ್ರಶಸ್ತಿಗಳು :** "ಸಿದ್ಧ ಸಂಸ್ಕಾರ" ಅಂತರರಾಷ್ಟ್ರೀಯ ಪ್ರಶಸ್ತಿ (2015), ಇವರ ಕುಟುಂಬಕ್ಕೆ "ವಿಶ್ವ ಆದರ್ಶ ಕುಟುಂಬ – 2020" ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಕರ್ನಾಟಕ ವಿಶ್ವ ವಿದ್ಯಾಲಯದ ಅತ್ಯುತ್ತಮ ಎನ್.ಎಸ್.ಎಸ್. ಸ್ವಯಂ ಸೇವಕ (1981), ಬಿ.ಎಸ್.ಎ.ಎಮ್. ಪದವಿಯಲ್ಲಿ ಕರ್ನಾಟಕ ವಿಶ್ವ ವಿದ್ಯಾಲಯಕ್ಕೆ ದ್ವಿತಿಯ ರ್‍ಯಾಂಕ್ (1982), ಅತ್ಯುತಮ ಜೇಸಿ ಪ್ರಶಸ್ತಿ (1992). ಭಾರತಿಯ ವೈದ್ಯ ಪದ್ದತಿ ಇಲಾಖೆಯ ಅತ್ಯುತ್ತಮ ವೈದ್ಯ – ಮುಖ್ಯ ಮಂತ್ರಿಗಳಿಂದ ಸನ್ಮಾನ (1997), ಮಡಿವಾಳ ಸಮುದಾಯದಿಂದ "ಮಾಚಿ ಮಡಿವಾಳ ರತ್ನ ಶ್ರೀ" ಪ್ರಶಸ್ತಿ (2005), "ಬಸವ ಮಾಚಿದೇವ ಶ್ರೀ" ಪ್ರಶಸ್ತಿ (2005), "ಶಿರೂರು ನಾಗರಿಕ ಸನ್ಮಾನ" (2005), ಪ್ರತಿಷ್ಠಿತ ಮಠಗಳಿಂದ "ಶರಣ ದಂಪತಿ" ಪ್ರಶಸ್ತಿ (2007), "ಶಿವಯೋಗಮಂದಿರ ಶತಮಾನೋತ್ಸವ ಗೌರವ ಸನ್ಮಾನ" (2010), "ಕಾಯಕ ಯೋಗಿ" ಪ್ರಶಸ್ತಿ (2012), "ಆರೋಗ್ಯ ದಾಸೋಹಿ" ಪ್ರಶಸ್ತಿ (2014), "ಶ್ರೀ ಧನ್ವಂತರಿ ವೈದ್ಯ ರತ್ನ" ಪ್ರಶಸ್ತಿ' (2015), "ಬಸವಶ್ರೀ" ಪ್ರಶಸ್ತಿ (2017) ಗೌರವ ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ. "ಮೂಲ ಭಕ್ತ ಶಿರೋಮಣಿ" ಪ್ರಶಸ್ತಿ (2017) ಇತ್ಯಾದಿ ಪ್ರಶಸ್ತಿಗಳಿಂದ ಹಾಗೂ ಗೌರವ ಸನ್ಮಾನಗಳಿಂದ ಗೌರವಿಸಲ್ಪಟ್ಟಿದ್ದಾರೆ.

**ಸಂಪಾದಕರು :** ಬೆಂಗಳೂರು ಕರ್ನಾಟಕ ರಾಜ್ಯ ಮಡಿವಾಳರ ಸಂಘದ "ನೊಂದವರ ಧ್ವನಿ ಪತ್ರಿಕೆ", ಮಹಾರಾಷ್ಟ್ರ ವರ್ಧಾ ಜಿಲ್ಲೆಯ ಪವನಾರ ಗ್ರಾಮದ ಬ್ರಹ್ಮವಿದ್ಯಾಮಂದಿರ ವಾಸಿ ಸ್ವಾತಂತ್ರ್ಯ ಹೋರಾಟಗಾರರಾದ ಚನ್ನಮ್ಮ ಹಳ್ಳಿಕೇರಿಯವರ ಪ್ರಕಾಶನದ "ಕನ್ನಡ ವಿಶ್ವನಾಗರಿ ಹಿಂದಿ ಲಿಪಿ ಪತ್ರಿಕೆ" ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ.

# ನಿವೇದನೆ

ಲಿಂಗಾಯತ ಧರ್ಮ ಭಾರತದ ಮೊದಲ ಏಕದೇವೋಪಾಸನಾ ಧರ್ಮವಾಗಿದೆ. ಬಸವಣ್ಣನವರು ೧೨ನೇ ಶತಮಾನದಲ್ಲಿ ಬಸವಧರ್ಮ ಸ್ಥಾಪನೆ ಮಾಡುವ ಮೊದಲು ಬಹುದೇವೋಪಾಸನೆಯ ಹಿಂದೂ ಧರ್ಮ, ತೀರ್ಥಂಕರರೇ ದೇವಸ್ವರೂಪರು ಎನ್ನುವ ಜೈನಧರ್ಮ ಮತ್ತು ದೇವರ ಬಗ್ಗೆ ಮೌನ ತಾಳಿದ ಅಜ್ಞೇಯವಾದಿ ಬೌದ್ಧ ಧರ್ಮಗಳು ಇದ್ದುವೆ ಹೊರತು ಏಕದೇವೋಪಾಸನೆಯ ಧರ್ಮಗಳು ಇರಲಿಲ್ಲ.

ಬಸವಣ್ಣನವರ ಏಕದೇವೋಪಾಸನೆಯ ಧರ್ಮ ಸಂಪೂರ್ಣ ಕ್ರಾಂತಿಕಾರಿ ಧರ್ಮವಾಗಿದೆ. ಇಡೀ ಜಗತ್ತಿನಲ್ಲಿ ದೇವಸ್ಥಾನಗಳಿಲ್ಲದ ಧರ್ಮ ಎಂದರೆ ಲಿಂಗಾಯತ ಧರ್ಮ ಒಂದೇ ಆಗಿದೆ. ಈ ಧರ್ಮದಲ್ಲಿ ಮಾನವರೇ ಜೀವಂತ ದೇವಾಲಯಗಳಾಗಿದ್ದಾರೆ. ಮಾನವರೊಳಗೇ ದೇವರಿದ್ದಾನೆ. ಆತ ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣನಾಗಿದ್ದಾನೆ. ಹೀಗಾಗಿ ಆತನ ಬಳಿ ಹೋಗಲು, ಆತನನ್ನು ನೋಡಲು, ಆತನನ್ನು ಇನ್ನೊಂದರ ಜೊತೆ ಹೋಲಿಸಲು ಮತ್ತು ಆತನ ಉದ್ದಗಲಗಳನ್ನು ಅಳೆಯಲು ಸಾಧ್ಯವಿಲ್ಲ. ಆತನೇ ಸೃಷ್ಟಿಕರ್ತನಾಗಿದ್ದು ಕಣ್ಣಿಗೆ ಕಾಣುವುದೆಲ್ಲವೂ ಆತನ ಸೃಷ್ಟಿಯಾಗಿದೆ. ನಾವು ಇಂಥ ನಮ್ಮೊಳಗಿನ ದೇವರ ಜೊತೆ ಒಂದಾಗುವುದೇ ಲಿಂಗಾಂಗಸಾಮರಸ್ಯ.

ವಿಶ್ವದ ಆದಿ ಮತ್ತು ಅನಂತಗಳು ಯಾರಿಗೂ ಗೊತ್ತಿಲ್ಲ. ಎಲ್ಲ ಜೀವಿಗಳು ಪೃಥ್ವಿಯಿಂದ ಉದ್ಭವವಾಗಿವೆ. ಕಣ್ಣಿಗೆ ಕಾಣುವ ಚರಾಚರ ವಸ್ತುಗಳೆಲ್ಲ ಒಂದಿಲ್ಲೊಂದು ದಿನ ಬಯಲಾಗಲೇಬೇಕು ಎಂಬುದು ಶರಣರು ಸಾರಿದ ಸತ್ಯವಾಗಿದೆ. ಈ ಸತ್ಯದ ಆಧಾರದ ಮೇಲೆಯೆ ಶರಣರು ಸಕಲಜೀವಾತ್ಮರಿಗೆ ಲೇಸಾಗುವಂಥ ಚಿಂತನೆಗಳನ್ನು ವಚನಗಳ ಮೂಲಕ ಮಾನವ ಕುಲಕ್ಕೆ ಧಾರೆ ಎರೆದಿದ್ದಾರೆ. ಆ ಮೂಲಕ ಮನದ ಕೊಳೆಯನ್ನು ಕಳೆಯಲು ಯತ್ನಿಸಿದ್ದಾರೆ. 'ಒಬ್ಬನೇ ದೇವರು, ಸಕಲ ಚರಾಚರಗಳಿಂದ ಕೂಡಿದ ಒಂದೇ ವಿಶ್ವ ಮತ್ತು ಒಂದೇ ಮಾನವ ಕುಲ' ಎಂಬ ಸತ್ಯವನ್ನು ಸಾರುವುದರ ಮೂಲಕ ಶರಣರು ಸಕಲಜೀವಾತ್ಮರಿಗೆ ಲೇಸನೆ ಬಯಸಿದರು. ಮಾನವ ಬದುಕಿನಲ್ಲಿ ತಾಂಡವವಾಡುತ್ತಿದ್ದ ಲಿಂಗಭೇದ, ವರ್ಗಭೇದ, ವರ್ಣಭೇದ ಮತ್ತು ಜಾತಿಭೇದ ಮುಂತಾದ ಭೇದಗಳನ್ನು ಅಲ್ಲಗಳೆದರು.

"ಬಸವಣ್ಣನ ಉದರದಲ್ಲಿ ಹುಟ್ಟಿತ್ತು ಲಿಂಗ" ಎಂದು ಚೆನ್ನಬಸವಣ್ಣನವರು ಹೇಳುವ ಮೂಲಕ 'ಬಸವಣ್ಣನವರೇ ಇಷ್ಟಲಿಂಗದ ಜನಕರು' ಎಂಬುದನ್ನು ಸೂಚಿಸಿದ್ದಾರೆ. "ಮಹಾಮಹಿಮ ಸಂಗನಬಸವಣ್ಣ ಎನಗೆಯು ಗುರು, ನಿಮಗೆಯು

ಗುರು ಕಾಣಾ ಗುಹೇಶ್ವರ" ಎಂದು ಅಲ್ಲಮಪ್ರಭುಗಳು ತಿಳಿಸಿದ್ದಾರೆ. "ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ? ಎನ್ನೊಳಗಿದ್ದು ನಿನ್ನ ತೋರಲಿಕೆ ನೀನೇ ರೂಪಾದೆ" ಎಂದು ಬಸವಣ್ಣನವರೇ ಹೇಳಿದ್ದಾರೆ.

ವೀರಶೈವವಾದಿಗಳು ಹೀಗೆ ಹೇಳುತ್ತಾರೆ ; ೧. ಇಷ್ಟಲಿಂಗ ಋಗ್ವೇದದ ಕಾಲದಿಂದಲೂ ಇದೆ. ೨. ಶರಣರು ಹೇಳಿದಂತೆ ಕಾಯಕದ ಬದುಕನ್ನು ನಡೆಸಲಿಕ್ಕಾಗದು. ೩. ಲಿಂಗಾಯತ ಶಬ್ದ ಕೇವಲ ಚೆನ್ನಬಸವಣ್ಣನವರ ವಚನಗಳಲ್ಲಿ ಎರಡು ಕಡೆ ಬರುತ್ತದೆ. ೪. ಶರಣರ ವಚನಗಳಲ್ಲಿ ವೇದಾಗಮಗಳ ವಾಕ್ಯಗಳನ್ನು ಉದ್ಧರಿಸಲಾಗಿದೆ. ೫. ಬಿಡಿ ಬಿಡಿಯಾಗಿರುವ ವಚನಗಳು ಅದು ಹೇಗೆ ಧರ್ಮಗ್ರಂಥ ಆಗುತ್ತವೆ? ವಿವಿಧ ಶರಣರ ವಚನಗಳಲ್ಲಿ ವೈರುಧ್ಯಗಳಿವೆ. ೬. ಪಂಚಾಚಾರ್ಯರು ವೀರಶೈವ ಧರ್ಮದ ಸ್ಥಾಪಕರು. ಬಸವಣ್ಣನವರು ವೀರಶೈವ ಧರ್ಮ ಸುಧಾರಕರು. ೭ ಸಿದ್ಧಾಂತ ಶಿಖಾಮಣಿಯ ವಿಚಾರಗಳೇ ವಚನಗಳಲ್ಲಿವೆ. ೮. ಗುರು ವಿರಕ್ತರಲ್ಲಿ ವ್ಯತ್ಯಾಸವಿದೆ. ಗುರುಸ್ಥಲದವರಿಗೆ ವೈರಾಗ್ಯವೂ ವೈಭವವೂ ಇರುತ್ತದೆ. ಅವರು ರಾಜಗುರುಗಳೂ ಹೌದು. ವಿರಕ್ತ ಸ್ವಾಮಿಗಳಿಗೆ ವೈಭವ ಇರುವುದಿಲ್ಲ ಎಂದು ಮುಂತಾಗಿ ಪಂಚಾಚಾರ್ಯ ಪ್ರಣೀತ ವೀರಶೈವವಾದಿಗಳು ವಾದಿಸುತ್ತಾರೆ.

ಅವರಿಗೆ ಹೀಗೆ ಹೇಳಬೇಕು : ಋಗ್ವೇದದಲ್ಲಿ ಇಷ್ಟಲಿಂಗ ಪದಪ್ರಯೋಗವೇ ಇಲ್ಲ. "ಅಯಂ ಮೇ ಹಸ್ತೋ ಭಗವಾನ್" (ನನ್ನ ಹಸ್ತದಲ್ಲಿರುವ ಭಗವಂತನೇ) ಎಂಬ ಋಗ್ವೇದದ ಋಕ್ಕೊಂದರ ಸಾಲನ್ನು ಎತ್ತಿ ಹೇಳುತ್ತ, ಅದನ್ನು ಇಷ್ಟಲಿಂಗಕ್ಕೆ ಹೋಲಿಸುವುದು ಸರಿಯಲ್ಲ. 'ನನ್ನ ಹಸ್ತವೇ ಭಗವಂತ' ಎಂದು ಈ ವಾಕ್ಯವನ್ನು ಡಾ. ಇಮ್ಮಡಿ ಶಿವಬಸವಸ್ವಾಮಿಗಳು ವ್ಯಾಖ್ಯಾನಿಸಿದ್ದನ್ನು ಡಾ. ಎನ್. ಜಿ. ಮಹಾದೇವಪ್ಪ ಅವರು 'ಲಿಂಗಾಯತರು ಹಿಂದೂಗಳಲ್ಲ' ಎಂಬ ಗ್ರಂಥದಲ್ಲಿ ದಾಖಲಿಸಿದ್ದಾರೆ.

ಇಂದಿಂಗೆ ನಾಳಿಂಗೆ ಎಂದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಎಂದು ಹೇಳುವ ಮೂಲಕ ಬಸವಣ್ಣನವರು ಸಂಗ್ರಹ ಬುದ್ಧಿಯನ್ನು ತಿರಸ್ಕರಿಸಿದ್ದಾರೆ. ಕಾಯಕದ ಮೂಲಕ ಬದುಕುವ ಮಾರ್ಗವನ್ನು ಹೇಳಿಕೊಟ್ಟಿದ್ದಾರೆ. ಈ ಕಾಯಕ ಸಿದ್ಧಾಂತದ ಮಾರ್ಗದಲ್ಲಿ ಹೋಗಲು ಪ್ರತಿಯೊಬ್ಬ ಲಿಂಗವಂತನು ಪ್ರಯತ್ನಿಸಬೇಕು. ಆದರೆ ಇದು ಅಸಾಧ್ಯವೆಂದು ಲಿಂಗಾಯತವನ್ನು ಒಪ್ಪಿಕೊಳ್ಳದ ಪಂಡಿತರು ವಾದಿಸುತ್ತಾರೆ.

"ವೇದಕ್ಕೆ ಒರೆಯ ಕಟ್ಟುವೆ .. .. ಆಗಮದ ಮೂಗ ಕೊಯಿವೆ" ಎಂದು ಹೇಳುವ ಬಸವಣ್ಣನವರು ಮತ್ತು ಅವರ ಶರಣರು ಅದು ಹೇಗೆ ವೇದಾಗಮಗಳ ಮೇಲೆ ಅವಲಂಬಿತರಾಗುತ್ತಾರೆ? ವಚನಗಳಲ್ಲಿ ಹಸ್ತಕ್ಷೇಪ ಮಾಡಿರುವ ವೇದಾಗಮಗಳ ಸಾಲುಗಳನ್ನು ತೆಗೆದು ವಚನಗಳನ್ನು ಶುದ್ಧೀಕರಿಸುವುದು ಈ ಕಾಲದ ಅವಶ್ಯಕತೆಯಾಗಿದೆ. ಭಸವಣ್ಣನವರ ಷಟ್‌ಸ್ಥಲ ವಚನಗಳಲ್ಲಿ ವೀರಶೈವ ಪದವೇ ಇಲ್ಲ. ಉಳಿದ ಅನೇಕ ವಚನಗಳಲ್ಲಿನ 'ಲಿಂಗಾಯತ' ಪದ ತೆಗೆದು 'ವೀರಶೈವ'

ಪದ ಸೇರಿಸಿದ್ದು ಮೇಲ್ನೋಟಕ್ಕೇ ಎದ್ದು ಕಾಣುತ್ತಿದೆ. ಆ ಮೂಲಕ ಪಟ್ಟಭದ್ರರು ಲಿಂಗಾಯತ ಪದವನ್ನೇ ಮಾಯ ಮಾಡಿದ್ದಾರೆ !

ವಚನ ಚಳವಳಿ ಕೇವಲ ಒಂದು ತಲೆಮಾರಿನ ಚಳವಳಿಯಾಗಿದೆ. ಕಾಯಕಜೀವಿಗಳ ಚಳವಳಿಯಾಗಿದೆ. ಬಿಡಿಬಿಡಿ ವಚನಗಳು ಮತ್ತು ಅವುಗಳಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಸಮೂಹ ಜ್ಞಾನದ ಮತ್ತು ಪ್ರಜಾಪ್ರಭುತ್ವ ಮಾದರಿಯ ಅಭಿವ್ಯಕ್ತಿ ಸ್ವಾತಂತ್ರ್ಯದ ಪ್ರತೀಕಗಳಾಗಿವೆ. ವಚನಗಳ ಸಂಕಲನವೆಂಬುದು ಅಪೌರುಷೇಯವಾದುದಲ್ಲ. ಶರಣರು ತಮ್ಮ ಅನುಭವದ ಆಧಾರದ ಮೇಲೆ ಅನುಭಾವದ ಎತ್ತರಕ್ಕೆ ಏರಿ ರಚಿಸಿದ ವಚನಗಳಿಂದ ಕೂಡಿದೆ. ಚಲನಶೀಲತೆಯನ್ನು ಉಳಿಸಿಕೊಂಡ ಬಯಲು ತತ್ತ್ವದ ಲಿಂಗಾಯತ ಧರ್ಮಗ್ರಂಥ ಇದಾಗಿದೆ.

ಪಂಚಾಚಾರ್ಯರು ವೀರಶೈವ ಧರ್ಮಸ್ಥಾಪಕರು ಎಂಬುದರ ಬಗ್ಗೆ ಸಹಮತವಿದೆ. ಆದರೆ ಬಸವಣ್ಣನವರು ವೀರಶೈವ ಧರ್ಮ ಸುಧಾರಕರಲ್ಲ. ಅವರು ಲಿಂಗಾಯತ ಧರ್ಮ ಸ್ಥಾಪಕರು. ಲಿಂಗಪ್ರಿಯರಾಗಿ ಬದುಕುವವರಿಗೆ ಲಿಂಗಾಯತರೆನ್ನುತ್ತಾರೆ. ಲೋಕಪ್ರಿಯರಾಗಿ ಬದುಕುವವರಿಗೆ ಲೋಕಾಯತರು ಎನ್ನುತ್ತಾರೆ. ಶರಣರು ಲಿಂಗಪ್ರಿಯರೂ ಹೌದು, ಲೋಕಪ್ರಿಯರೂ ಹೌದು. ಅಂತೆಯೆ ಅವರು ಇಷ್ಟಲಿಂಗ ಮತ್ತು ಜಂಗಮಲಿಂಗದ ಪ್ರತಿಪಾದಕರಾಗಿದ್ದರು. "ಇನ್ನು ಜಂಗಮವೇ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ" ಎಂದು ಬಸವಣ್ಣನವರು ಹೇಳಿದ್ದಾರೆ. ಸಕಲಜೀವಾತ್ಮರ ಸಮೂಹವಾದ ಜಂಗಮವನ್ನೇ ಶರಣರು ದೇವರೆಂದು ನಂಬಿದ್ದಾರೆ.

ಸಿದ್ಧಾಂತ ಶಿಖಾಮಣಿಯು ವಚನಗಳ ನಂತರದ ಕೃತಿಯಾಗಿರುವುದರಿಂದ ಅದರ ವಿಚಾರಗಳು ವಚನಗಳಲ್ಲಿವೆ ಎಂದು ಹೇಳುವುದು ಅಸಮಂಜಸವಾಗುತ್ತದೆ.

ಗುರುವರ್ಗದವರಿಗೆ ವೈರಾಗ್ಯವೂ ವೈಭವವೂ ಇರಬಹುದು. ಅದನ್ನು ಯಾರೂ ಪ್ರಶ್ನಿಸುವಂತಿಲ್ಲ. ಆದರೆ ಲಿಂಗಾಯತ ಧರ್ಮದಲ್ಲಿ ಅರಿವೇ ಗುರು ಆಗಿದೆ. ದೇವರೇ ಸ್ವಾಮಿ ಆಗಿದ್ದಾನೆ. "ಸ್ವಾಮಿ ನೀನು ಶಾಶ್ವತ ನೀನು" ಎಂದು ಬಸವಣ್ಣನವರು ಹೇಳಿದ್ದಾರೆ. ಲಿಂಗಾಯತ ಸ್ವಾಮಿಗಳು ಶರಣರ ತತ್ತ್ವಗಳನ್ನು ಜಗತ್ತಿಗೆ ತಲುಪಿಸುವ ಮಣಿಹವನ್ನು ಪೂರೈಸಬೇಕಾಗಿದೆ. ಇದುವೇ ಅವರ ಮಹಾ ಕಾಯಕವಾಗಿದೆ.

ರೇಣುಕಾದಿ ಪಂಚಾಚಾರ್ಯರು ವೀರಶೈವ ಧರ್ಮ ಸ್ಥಾಪಕರು ಮತ್ತು ಸಿದ್ಧಾಂತ ಶಿಖಾಮಣಿ ವೀರಶೈವ ಧರ್ಮಗ್ರಂಥ ಎಂದು ಹೇಳುವುದು ಸರಿಯಾಗಿಯೇ ಇದೆ. ಅದೇ ರೀತಿ ಬಸವಣ್ಣನವರು ಲಿಂಗಾಯತ ಧರ್ಮಸ್ಥಾಪಕರು. ೭೭೦ ಅಮರಗಣಂಗಳು ಲಿಂಗಾಯತ ಧರ್ಮದ ನಾಯಕರು. ವಚನಗಳೇ ಲಿಂಗಾಯತ ಧರ್ಮಗ್ರಂಥ. ಅನುಭಾವವೇ ಲಿಂಗಾಯತ ದರ್ಶನ. ಲಿಂಗಾಂಗಸಾಮರಸ್ಯವೇ ಲಿಂಗಾಯತರ ಜೀವನ್ಮುಕ್ತಿ.

ಲಿಂಗಾಯತ ಧರ್ಮ ೧೨ನೇ ಶತಮಾನದಲ್ಲೇ ಸ್ವತಂತ್ರ ಧರ್ಮವಾಗಿ ರೂಪುಗೊಂಡಿದೆ. ಆದರೆ ಪಟ್ಟಭದ್ರ ಹಿತಾಸಕ್ತಿಗಳು ಅಂದಿನಿಂದ ಇಂದಿನವರೆಗೂ ಈ ಧರ್ಮದ ವಿರುದ್ಧ ಕತ್ತಿ ಮಸಿಯುತ್ತಲೇ ಇದ್ದಾರೆ. ಈ ಧರ್ಮದ ಉಳಿವಿಗಾಗಿ ಶರಣರು ತಮ್ಮ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡಿದರು. ಅನೇಕರು ಹುತಾತ್ಮರಾದರು. ಲಕ್ಷಾಂತರ ಜನರು ದಿಕ್ಕಾಪಾಲಾಗಿ ಹೋದರು. ಅವರು ರಚಿಸಿದ ಅಮೂಲ್ಯ ವಚನಗಳ ಬಹುಭಾಗವನ್ನು ಯಥಾಸ್ಥಿತಿವಾದಿಗಳು ಸುಟ್ಟು ಹಾಕಿದರು. ಶರಣರ ಮೇಲೆ ನಡೆದ ಹಿಂಸೆ ಮತ್ತು ಕೊಲೆಸುಲಿಗೆಗಳ ಬಗ್ಗೆ ಮನುವಾದಿ ವಿದ್ವಾಂಸರಿಗೆ ಅರಿವಿದ್ದರೂ ಲಿಂಗಾಯತ ಧರ್ಮಕ್ಕೆ ಸಾಂವಿಧಾನಿಕ ಮಾನ್ಯತೆಗಾಗಿ ನಡೆಯುವ ಹೋರಾಟವನ್ನು ವಿರೋಧಿಸುತ್ತಿದ್ದಾರೆ. ಇಂಥ ಸಂದರ್ಭದಲ್ಲಿ ಲಿಂಗಾಯತರು ತಮ್ಮ ಧರ್ಮದ ಉಳಿವಿಗಾಗಿ ಅಹಿಂಸಾತ್ಮಕ ಹೋರಾಟ ಮಾಡುವುದು ಅವಶ್ಯವಾಗಿದೆ.

ಧಾರವಾಡ — ರಂಜಾನ್ ದರ್ಗಾ

೧೪.೦೭.೨೦೧೭

## ಹನ್ನೊಂದನೆಯ ಮುದ್ರಣಕ್ಕೊಂದು ಮಾತು

"ಲಿಂಗವಂತ ಧರ್ಮದ ಸತ್ಯದರ್ಶನ" ಕೃತಿಯ ಹನ್ನೊಂದನೆಯ ವಿಸ್ತೃತ ಮುದ್ರಣವು ಗ್ರಂಥದಾಸೋಹಿಗಳಾದ ಡಾ ಸಂಗಮೇಶ ಕಲಹಾಳ ಅವರ ಆಸಕ್ತಿಯಿಂದಾಗಿ ಓದುಗರ ಕೈ ಸೇರುತ್ತಿದೆ. ಶ್ರೀ ಮಾಚಿದೇವ ಮಹಾಸಂಸ್ಥಾನ ಮಠದ ವತಿಯಿಂದ ಈ ಗ್ರಂಥ ಪ್ರಕಟವಾಗುತ್ತಿದೆ.

ಈ ಗ್ರಂಥ ಪ್ರಕಟನೆಗೆ ಕಾರಣವಾದ ಮಠಾಧೀಶರಾದ ಡಾ. ಶ್ರೀ ಮಾಚಿದೇವ ಮಹಾಸ್ವಾಮಿಗಳವರಿಗೆ, ಗ್ರಂಥ ದಾಸೋಹಿ ಡಾ॥ ಸಂಗಮೇಶ ಕಲಹಾಳ ಅವರಿಗೆ, ಮಠದ ಸಹ ಕಾರ್ಯದರ್ಶಿ ಶ್ರೀ ಮಂಜುನಾಥ ಎ.ಆರ್. ಅವರಿಗೆ ಮತ್ತು ಸುಂದರವಾಗಿ ಮುದ್ರಿಸಿದ ಮನೋಹರ ಪ್ರಿಂಟಿಂಗ್ ಪ್ರೆಸ್ಸಿನ ಶ್ರೀ ರವಿ ಆಕಳವಾಡಿ ಅವರಿಗೆ ಹಾಗೂ ಪ್ರೆಸ್ಸಿನ ಕಾರ್ಮಿಕ ವರ್ಗದವರಿಗೆ ಕೃತಜ್ಞತೆಗಳು.

೨೩.೦೪.೨೦೨೩ — ರಂಜಾನ್ ದರ್ಗಾ

ಬಸವ ಜಯಂತಿ

# ಪರಿವಿಡಿ

ಪರಬ್ರಹ್ಮವ ಕೆಡಿಸಿತ್ತು, ಪ್ರಣವಮಂತ್ರವನೀಡಾಡಿತ್ತಲ್ಲಾ!
ಕರ್ಮಂಗಳನೆ ಕಳೆಯಿತ್ತು, ಕ್ರೀಗಳನೆ ಮೀರಿತ್ತಲ್ಲಾ!
ಆಗಮದ ಹಲ್ಲನೆ ಕಳೆಯಿತ್ತು
ಕೂಡಲಸಂಗಯ್ಯನ ಭಕ್ತಿಗಜ ಹೋ!

– ಬಸವಣ್ಣ

ದೇವರನ್ನು ನಂಬುವ ಧರ್ಮಗಳ ಧರ್ಮಗ್ರಂಥಗಳು ಅಪೌರುಷೇಯ ಎನಿಸಿಕೊಳ್ಳುತ್ತವೆ. ಆದರೆ ಶರಣರ ವಚನಗಳು ತಮ್ಮೊಳಗಿನ ದೇವರಿಗೆ ಅರ್ಪಿಸಿದ ಆತ್ಮ ನಿವೇದನೆಗಳಾಗಿವೆ. ವಚನ ಸಂಪುಟಗಳು ಲಿಂಗಾಯತರ ಧರ್ಮಗ್ರಂಥ.

ಅಗಮ್ಯ ಅಗೋಚರ ಅಪ್ರತಿಮ ಮತ್ತು ಅಪ್ರಮಾಣನಾದ ದೇವರನ್ನು ದಯೆಯ ರೂಪದಲ್ಲಿ ಕಂಡು, ಅರಿವೇ ಗುರುವಾಗಿಸಿ, ಮಠ ಮಂದಿರ ಮೂರ್ತಿ ಸ್ವರ್ಗ ನರಕ ಪುಣ್ಯ ಪಾಪ ಪುನರ್ಜನ್ಮ ಮೋಕ್ಷ ಮತ್ತು ಕರ್ಮಸಿದ್ಧಾಂತವನ್ನು ತಿರಸ್ಕರಿಸಿ ಏಕ ದೇವೋಪಾಸನೆಯ ಮಹತ್ವ ಸಾರಿದ ಜಗತ್ತಿನ ಏಕೈಕ ಧರ್ಮವೆಂದರೆ ಬಸವಧರ್ಮ.

ರಾಜಶಕ್ತಿಯ ಹಂಗಿಲ್ಲದೆ ಬದುಕಲು ಕಲಿಸಿದ ಧರ್ಮವೆಂದರೆ ಬಸವ ಧರ್ಮ.

ಲೋಕಾಯತರು ಭೂಮಿ ಹದ ಮಾಡಿದರು. ಬುದ್ಧ ಬೀಜ ಬಿತ್ತಿದ. ಬಸವ ಮರವಾಗಿಸಿದರು. ಅಂಬೇಡ್ಕರ್ ಫಲವಾಗಿಸಿದರು. ನಾವು ಫಲಾನುಭವಿಗಳಾದೆವು.

– ರಂಜಾನ್ ದರ್ಗಾ

# ಲಿಂಗಾಯತವೇ ಸತ್ಯ

"ನಾನು ಶೈವನಿದ್ದೆ ವೀರಶೈವನಾದೆ ಎಂದು ಬಸವಣ್ಣನವರು ಹೇಳಿದ್ದಾರೆ. ಅವರ ವಚನಗಳಲ್ಲಿ ಎಲ್ಲಿಯೂ ಲಿಂಗಾಯತ ಪದ ಬಳಕೆಯಾಗಿಲ್ಲ" ಎಂದು ಮುಂತಾಗಿ ಪಂಚಾಚಾರ್ಯರು ಮತ್ತು ಡಾ. ಎಂ. ಚಿದಾನಂದಮೂರ್ತಿ ಅಂಥವರು ಹೇಳುತ್ತಲೇ ಇದ್ದಾರೆ. ಇದರಿಂದಾಗಿ ಜನರಲ್ಲಿ ಸಹಜವಾಗಿಯೆ ಗೊಂದಲ ಸೃಷ್ಟಿಯಾಗುತ್ತಿದೆ.

12ನೇ ಶತಮಾನ 'ವಚನಯುಗ' ಎನಿಸಿದರೆ 15ನೇ ಶತಮಾನ 'ವಚನಸಂಕಲನ ಯುಗ' ಎನಿಸಿತು. ಈ ಸಂದರ್ಭದಲ್ಲಿ ಬಸವಣ್ಣ, ಅಲ್ಲಮಪ್ರಭು ಮತ್ತು ಚೆನ್ನಬಸವಣ್ಣನವರ ವಚನಗಳನ್ನು ಷಟ್‌ಸ್ಥಲಗಳಲ್ಲಿ ವಿಂಗಡಿಸಿ ಹಸ್ತಪ್ರತಿಗಳನ್ನು ಸಿದ್ಧಪಡಿಸಲಾಯಿತು. ಈ ಮೂವರ ವಚನಕಟ್ಟುಗಳು ಮಠಮಾನ್ಯಗಳಲ್ಲಿ, ವಿದ್ವಜ್ಜನರ ಮತ್ತು ಶ್ರೀಮಂತರ ಮನೆಗಳಲ್ಲಿ ವಿಜೃಂಭಿಸಿದವು. ಇದೇ ಕಾರಣದಿಂದ ಈ ಷಟ್‌ಸ್ಥಲ ವಚನಕಟ್ಟುಗಳಲ್ಲಿನ ವಚನಗಳನ್ನು ತಮ್ಮ ಇಚ್ಛೆಗನುಸಾರವಾಗಿ ತಿದ್ದುವ ಸಾಹಸವನ್ನು ಪ್ರತಿಗಾಮಿ ಶಕ್ತಿಗಳು ಮಾಡಲಿಲ್ಲ. ಹೀಗಾಗಿ ಈ ಮೂವರ ಷಟ್‌ಸ್ಥಲ ವಚನಗಳಲ್ಲಿ ಎಲ್ಲಿಯೂ 'ವೀರಶೈವ' ಪದ ಬಳಕೆಯಾಗಿಲ್ಲ.

ಶರಣಪ್ರಿಯ ಸಾಹಿತಿಗಳಾದ 13ನೇ ಶತಮಾನದ ಹರಿಹರ, ರಾಘವಾಂಕ ಮತ್ತು ಕೆರೆಯಪದ್ಮರಸರ ಕೃತಿಗಳಲ್ಲಿ ಕೂಡ 'ವೀರಶೈವ' ಪದ ಬಳಕೆಯಾಗಿಲ್ಲ. ಬಸವಣ್ಣನವರ ಸಮಕಾಲೀನರಾದ ಪಂಡಿತಾರಾಧ್ಯರ 'ಶಿವತತ್ತ್ವಸಾರಮು' ತೆಲಗು ಕೃತಿಯಲ್ಲಿ ಕೂಡ ಈ ಪದ ಬಳಕೆಯಾಗಿಲ್ಲ. ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣದಲ್ಲಿಯೂ ವೀರಶೈವ ಪದದ ಬಳಕೆಯಾಗಿಲ್ಲ! ಈ ಕೃತಿಯ ಆಧಾರದ ಮೇಲೆ ಭೀಮಕವಿಯ 'ಬಸವಪುರಾಣ' ಕ್ರಿಸ್ತಶಕ 1368ರಲ್ಲಿ ರಚನೆಯಾಗಿದೆ. ಪಾಲ್ಕುರಿಕೆ ಸೋಮನಾಥ ಬಳಸಿದ 'ವೀರಮಾಹೇಶ್ವರ' ಪದದ ಬದಲಿಗೆ ಭೀಮಕವಿ 'ವೀರಶೈವ' ಪದ ಪ್ರಯೋಗ ಮಾಡಿದ.

ಷಟ್‌ಸ್ಥಲ ವಚನ ಸಂಪುಟಗಳಲ್ಲಿ ಒಂದು ಕಡೆ ಕೂಡ ಸಿಗದ ವೀರಶೈವ ಪದ ಅದು ಹೇಗೆ ಹೆಚ್ಚಿನ ವಚನಗಳಲ್ಲಿ ಸೇರ್ಪಡೆಯಾಯಿತು ಎಂಬುದರ ಕುರಿತು ಚಿಂತಿಸುವುದು ಅವಶ್ಯವಾಗಿದೆ. ಷಟ್‌ಸ್ಥಲ ವಚನಕಟ್ಟುಗಳು ಸಿದ್ಧವಾಗುವ ಸಂದರ್ಭದಲ್ಲಿ 'ವೀರಶೈವ' ಶಬ್ದಕ್ಕೆ ವಚನ ಸಾಹಿತ್ಯದಲ್ಲಿ ಮಹತ್ವವಿರಲಿಲ್ಲ. 12ನೇ ಶತಮಾನದಲ್ಲಿ 'ವೀರಶೈವವ್ರತ' ಎಂಬುದು ಪ್ರಚಾರದಲ್ಲಿತ್ತು. ಅದು ಆಗ ಶೈವಧರ್ಮದ ಒಂದು

ಶಾಖೆ ಕೂಡ ಆಗಿರದೆ ಕೇವಲ ಒಂದು ವ್ರತವಾಗಿತ್ತು. ಈ ವ್ರತದ ಬಗ್ಗೆ ಶರಣರಿಗೆ ತಿರಸ್ಕಾರವಿತ್ತು. ಅಂತೆಯೆ ಬಸವಣ್ಣನವರ ಸಮಕಾಲೀನ ವಚನಕಾರ್ತಿ ಅಮುಗೆ ರಾಯಮ್ಮ:

"ಸರ್ವಾಗಮ ಶ್ರುತಿ ಸ್ಮೃತಿ ಪುರಾಣ ಪಾಠಕನಾದಡೇನು?
ಸರ್ವಮಂತ್ರ ತಂತ್ರ ಸಿದ್ಧಿ ಮರ್ಮವರಿತಡೇನು?
ನಿತ್ಯ ಶಿವಾರ್ಚನೆ ತ್ರಿಕಾಲವಿಲ್ಲ.
ನಿತ್ಯ ಪಾದೋದಕ ಪ್ರಸಾದ ಸೇವನೆಯಿಲ್ಲ.
ಇದೇತರ ವೀರಶೈವವ್ರತ ಇದೇತರ ಜನ್ಮಸಾಫಲ್ಯ ಅಮುಗೇಶ್ವರಲಿಂಗವೆ?"

ಎಂದು ವೀರಶೈವ ವ್ರತವನ್ನು ತಿರಸ್ಕರಿಸಿದ್ದಾಳೆ.

ಈ ವೀರಶೈವ ವ್ರತವನ್ನು ಆಚರಿಸುವವರಿಗೆ 'ವೀರವ್ರತಿ' ಎಂದು ಕರೆಯುತ್ತಿದ್ದರು. ಬಸವಣ್ಣನವರು ಈ ವೀರವ್ರತಿಗಳನ್ನು ಸೂಚ್ಯವಾಗಿ ಟೀಕಿಸಿದ್ದಾರೆ. "ವೀರವ್ರತಿ ಭಕ್ತನೆಂದು ಹೊಗಳಿಕೊಂಬಿರಿ ಕೇಳಿರಯ್ಯಾ; ವೀರನಾದಡೆ ವೈರಿಗಳು ಮೆಚ್ಚಬೇಕು, ವ್ರತಿಯಾದಡೆ ಅಂಗನೆಯರು ಮೆಚ್ಚಬೇಕು. ಭಕ್ತನಾದಡೆ ಜಂಗಮವೇ ಮೆಚ್ಚಬೇಕು" ಎಂದಿದ್ದಾರೆ.

ಬಸವಣ್ಣನವರು ಈ ವಚನದ ಮೂಲಕ 'ವೀರವ್ರತಿ ಎನ್ನಿಸಿಕೊಳ್ಳುವ ಭಕ್ತನು ವೀರನೂ ಅಲ್ಲ, ವ್ರತಿಯೂ ಅಲ್ಲ ಮತ್ತು ಭಕ್ತನೂ ಅಲ್ಲ' ಎಂಬುದನ್ನು ಸೂಚಿಸಿದ್ದಾರೆ. ಶರಣರು ವೀರಶೈವವ್ರತವನ್ನು ಮತ್ತು ವೀರವ್ರತಿಗಳನ್ನು ತಿರಸ್ಕರಿಸಿದ್ದರು ಎಂಬುದಕ್ಕೆ ಈ ವಚನಗಳು ಸಾಕ್ಷಿಯಾಗಿವೆ.

ಶರಣರು ಸ್ಥಾಪಿಸಿದ ಕ್ರಾಂತಿಕಾರಿ ವಚನೋಕ್ತ ಲಿಂಗಾಯತ ಧರ್ಮವನ್ನು ವೀರಶೈವವಾದಿಗಳು ಬದಿಗೊತ್ತಿ ತಮ್ಮದೇ ಆದ ಆಗಮೋಕ್ತ ವೀರಶೈವ ಧರ್ಮವನ್ನು 15ನೇ ಶತಮಾನದ ಹೊತ್ತಿಗೆ ಎತ್ತಿ ಹಿಡಿದರು. ಅದೇ ವೇಳೆ ಅವರ ಧರ್ಮಗ್ರಂಥವಾದ 'ಸಿದ್ಧಾಂತ ಶಿಖಾಮಣಿ'ಯ ರಚನೆಯಾಯಿತು. ಈ ಸಂದರ್ಭದಲ್ಲಿ ವೀರಶೈವ ಪದ ಹೆಚ್ಚು ಬಳಕೆಯಾಗತೊಡಗಿತು. ಇದಾದ ನಂತರ ಶರಣರ ಹೆಚ್ಚಿನ ವಚನಗಳಲ್ಲಿ ಮಾತ್ರ ಸಾಧ್ಯವಾದ ಕಡೆಗಳಲ್ಲೆಲ್ಲ ಲಿಂಗಾಯತ ಮತ್ತು ಲಿಂಗವಂತ ಪದಗಳ ಬದಲಿಗೆ ವೀರಶೈವ ಪದಗಳನ್ನು ಸೇರಿಸಿ ವಚನಗಳ ಹಸ್ತಪ್ರತಿಗಳನ್ನು ಸಿದ್ಧಪಡಿಸಲಾಯಿತು. ಆದರೆ ಅವರಿಗೆ ಬಹುಪ್ರಚಾರದಲ್ಲಿದ್ದ ಷಟ್‌ಸ್ಥಲ ವಚನಕಟ್ಟುಗಳಲ್ಲಿ ಒಂದು ಕಡೆಯೂ ವೀರಶೈವ ಪದ ಸೇರಿಸಲಿಕ್ಕಾಗಲಿಲ್ಲ ಎಂಬುದು ಗಮನಾರ್ಹವಾಗಿದೆ.

ವಚನಗಳಲ್ಲಿ ಲಿಂಗಾಯತಕ್ಕಿಂತ ಲಿಂಗವಂತ ಪದವೇ ಹೆಚ್ಚಾಗಿ ಬಳಕೆಯಾಗಿದೆ. ಏಕೆಂದರೆ ಲಿಂಗವು ಅಂಗಕ್ಕೆ ಬರುವಂಥದ್ದು ಲಿಂಗಾಯತ. ಇದು ಮೊದಲ ಘಟ್ಟ. ಎರಡನೇ ಘಟ್ಟ ಲಿಂಗಸ್ವಾಯತ. ಮೂರನೇ ಘಟ್ಟ ಲಿಂಗಸನ್ನಿಹಿತ. ಈ ಮೂರೂ ಘಟ್ಟಗಳನ್ನು ತಲುಪಿದಾತ ಲಿಂಗವಂತ. ಲಿಂಗಾಯತದಿಂದ

ಆರಂಭವಾಗಿ ಲಿಂಗವಂತದಲ್ಲಿ ಕೊನೆ ಮುಟ್ಟುವುದರಿಂದ ವಚನಗಳಲ್ಲಿ ಲಿಂಗವಂತ ಪದ ಹೆಚ್ಚಾಗಿ ಬಳಕೆಯಾಗಿದೆ. ಲಿಂಗವಂತದ ಮೂಲ ಲಿಂಗಾಯತದಲ್ಲಿದೆ. ಆದ್ದರಿಂದ 'ಲಿಂಗಾಯತರು' ಎಂಬ ಪದವೇ ಜನಮನದಲ್ಲಿ ಅಚ್ಚೊತ್ತಿದೆ.

ಬಸವಣ್ಣನವರು 12ನೇ ಶತಮಾನದಲ್ಲಿ ಲಿಂಗಾಯತ ಧರ್ಮ ಸ್ಥಾಪನೆ ಮಾಡುವ ಪೂರ್ವದಲ್ಲಿ ಸ್ಥಾವರಲಿಂಗಗಳು ಮತ್ತು ಅವುಗಳ ಚಿಕ್ಕ ಮಾದರಿಗಳಾದ ಚರಲಿಂಗಗಳು ಬಳಕೆಯಲ್ಲಿದ್ದವು. ಬಸವಣ್ಣನವರು ಚಳವಳಿ ರೂಪದ ಜಾತ್ಯತೀತ ಲಿಂಗಾಯತ ಧರ್ಮ ಸ್ಥಾಪನೆ ಜೊತೆ ಇಷ್ಟಲಿಂಗವನ್ನೂ ಸೃಷ್ಟಿಸಿದರು. ಅಂತೆಯೆ 'ಬಸವಣ್ಣನ ಉದರದಲ್ಲಿ ಹುಟ್ಟಿತ್ತು ಲಿಂಗ' ಎಂದು ಚೆನ್ನಬಸವಣ್ಣನವರು ತಿಳಿಸಿದ್ದಾರೆ. 'ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ' ಎಂದು ಬಸವಣ್ಣನವರೇ ಇಷ್ಟಲಿಂಗವನ್ನು ಉದ್ದೇಶಿಸಿ ಹೇಳಿದ್ದಾರೆ.

"ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿಘನವೆತ್ತಿ ತೋರಿ,
ಎನ್ನ ಹೊಂದಿದ ಶೈವಮಾರ್ಗಂಗಳನತಿಗಳೆದು,
ನಿಜವೀರಶೈವಾಚಾರವನರುಹಿ ತೋರಿ,
ಎನ್ನ ಕರಸ್ಥಲದ ಸಂಗಮನಾಥನಲ್ಲಿ ಮಾಡುವ
ಜಪ ಧ್ಯಾನ ಉಪಚರಿಯ ಅರ್ಪಿತ ಪ್ರಸಾದಭೋಗಂಗಳಲ್ಲಿ ಸಂದಿಸಿದ
ಶೈವಕರ್ಮವ ಕಳೆದು,
ಭವಮಾಲೆಯ ಹರಿದು, ಭಕ್ತಿ ಮಾಲೆಯನಿತ್ತು,
ಭವಜ್ಞಾನವ ಕೆಡೆಮೆಟ್ಟಿ, ಭಕ್ತಿಜ್ಞಾನವ ಗಟ್ಟಿಗೊಳಿಸಿ,
ಭವಮಾಟಕೂಟವ ಬಿಡಿಸಿ, ಭಕ್ತಿಮಾಟಕೂಟವ ಹಿಡಿಸಿ,
ಭವಶೇಷವನುತ್ತರಿಸಿ, ಭಕ್ತಿಶೇಷವನಿತ್ತು.
ಎನಗೆ ಎನ್ನ ಬಳಿವಿಡಿದು ಬಂದ ಶರಣಗಣಂಗಳೆಲ್ಲರಿಗೆ
ಶಿವಸದಾಚಾರದ ಘನವನರುಹಿ ತೋರಿ,
ಮರ್ತ್ಯಲೋಕದಲ್ಲಿ ಸತ್ಯ ಸದಾಚಾರವನು ಹರಿಸಿ, ಶಿವಭಕ್ತಿಯನುದ್ಧರಿಸಿ,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣ ಎನ್ನನಾಗುಮಾಡಿ ಉಳುಹಿದನಾಗಿ
ಇನ್ನೆನಗೆ ಭವವಿಲ್ಲದೆ, ಬಂಧನವಿಲ್ಲದೆ, ಭಕ್ತಿ ಮಾಟಕೂಟದ ಗೊತ್ತಿನಲ್ಲಿರ್ದ
ನಾನು ಚೆನ್ನಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕುವೆನು."

ಎಂದು ಚೆನ್ನಬಸವಣ್ಣನವರ ಕುರಿತ ಬಸವಣ್ಣನವರ ವಚನವೊಂದು ಅವರ ಹೆಚ್ಚಿನ ವಚನಗಳಲ್ಲಿ ಇದೆ. ಇದನ್ನೇ ಹಿಡಿದು ಪಂಚಾಚಾರ್ಯರು ಮತ್ತು ಇತರ ವೀರಶೈವವಾದಿಗಳು ನಿರಂತರ ವಾದ ಮಾಡುತ್ತಿದ್ದಾರೆ. ಆದರೆ ಈ ಸಾಲುಗಳು ಶೈವಮಾರ್ಗಗಳಿಗೆ ವಿರುದ್ಧವಾಗಿವೆ. ಅಷ್ಟೇ ಅಲ್ಲದೆ ಈ ವಚನದಲ್ಲಿ ಲಿಂಗಾಯತದ ಬದಲಿಗೆ ವೀರಶೈವ ಪದವನ್ನು ಹಿಂದಿನ ಶತಮಾನಗಳಲ್ಲಿ ವೀರಶೈವವಾದಿಗಳು ಸೇರಿಸಿದ್ದು ಮೇಲ್ನೋಟಕ್ಕೇ ಎದ್ದು ಕಾಣುತ್ತಿದೆ.

ಈ ವಚನದಲ್ಲಿ ಬರುವ "ಎನ್ನ ಹೊಂದಿದ ಶೈವಮಾರ್ಗಂಗಳನು ಅತಿಗಳೆದು", "ಶೈವಕರ್ಮವ ಕಳೆದು", ಮುಂತಾದ ಪದಪುಂಜಗಳಲ್ಲಿ ಬಸವಣ್ಣನವರು ಸಪ್ತಶೈವಗಳನ್ನು ತಿರಸ್ಕರಿಸಿದ್ದಾರೆ. "ಭವಿಶೈವದೈವ ಕ್ಷೇತ್ರತೀರ್ಥಂಗಳಾದಿಯಾದ ಹಲವು ಲಿಂಗಾರ್ಚನೆಯ ಮನದಲ್ಲಿ ನೆನೆಯಲಿಲ್ಲ" ಎಂದು ಇನ್ನೊಂದು ಹೆಚ್ಚಿನ ವಚನದಲ್ಲಿ ತಿಳಿಸಿದ್ದಾರೆ. ಹೀಗೆ ಬಸವಣ್ಣನವರು ಎಲ್ಲ ಸ್ಥಾವರಲಿಂಗಗಳನ್ನು ತಿರಸ್ಕರಿಸಿದ್ದಾರೆ. ಬಸವಣ್ಣನವರು ಇಷ್ಟಲಿಂಗ ನಿಷ್ಠೆಯನ್ನು ಬಿಟ್ಟು ಇನ್ನಾವ ಲಿಂಗಗಳಿಗೂ ಮನಸೋತಿಲ್ಲ. ಇಡೀ ಸಪ್ತಶೈವವನ್ನೇ ತಿರಸ್ಕರಿಸಿದ ಬಸವಣ್ಣನವರು, ಸಪ್ತಶೈವದ ಒಂದು ಉಪಶಾಖೆಯಾದ ವೀರಶೈವವನ್ನು ಒಪ್ಪಿಕೊಳ್ಳಲು ಸಾಧ್ಯವೆ?

ವೀರಶೈವವು 28 ಆಗಮಗಳ ಮೂಲದಿಂದ ಸೃಷ್ಟಿಯಾದ ಸಪ್ತಶೈವಗಳಲ್ಲಿನ ಒಂದು ಉಪಶಾಖೆಯಾಗಿದೆ. ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅಂತರಶೈವ, ಪ್ರವರಶೈವ ಮತ್ತು ಅಂತ್ಯಶೈವ ಎಂಬ ಏಳು ಪ್ರಭೇದಗಳಿವೆ. ಹೀಗೆ ಸಪ್ತಶೈವಗಳ ಮೂಲಕ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ ಮತ್ತು ವೀರಶೈವ ಎಂಬ ನಾಲ್ಕು ಪಂಗಡಗಳು ಹೊರಹೊಮ್ಮಿವೆ. ವೀರಶೈವದಲ್ಲಿ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂಬ ಮೂರು ಪ್ರಕಾರದ ವೀರಶೈವಗಳಿವೆ.

ಆಗಮೋಕ್ತ ಶೈವ ಪಂಗಡಗಳಿಗೂ ಲಿಂಗಾಯತಕ್ಕೂ ಸಂಬಂಧವಿಲ್ಲ ಎಂಬುದು ಬಸವಣ್ಣನವರ ವಚನಗಳಿಂದಲೇ ಸಾಬೀತಾಗಿದೆ. ಬಸವಣ್ಣನವರು ಸ್ಥಾಪಿಸಿದ ಲಿಂಗಾಯತ ಧರ್ಮ ಬಸವಾದಿ ಶರಣರ ವಚನರೂಪಿ ಹೊಸನುಡಿಯ ಧರ್ಮವಾಗಿದೆ. ಲಿಂಗಾಯತವು ಶರಣರ ಅನುಭವದ ಮೂಲಕ ಅನುಭಾವದ ಎತ್ತರಕ್ಕೆ ಏರಿದ ವಚನಗಳಿಂದ ಮೂಡಿ ಬಂದಿದೆ. ಆದರೆ ಅನೇಕರು ಲಿಂಗಾಯತಕ್ಕೆ ವೀರಶೈವವನ್ನು ಸಮಾನಾರ್ಥದಲ್ಲಿ ಬಳಸಿ ಗೊಂದಲ ಸೃಷ್ಟಿಸಿದ್ದಾರೆ.

'ವೇದಕ್ಕೆ ಒರೆಯ ಕಟ್ಟುವೆ' (ವೇದಗಳನ್ನು ಗಂಟುಕಟ್ಟಿ ಇಡುವೆ) ಎಂದು ಹೇಳುವ ಮೂಲಕ ಬಸವಣ್ಣನವರು ವೇದೋಕ್ತ ವೈದಿಕ ಧರ್ಮವನ್ನು ತಿರಸ್ಕರಿಸಿದ್ದಾರೆ. 'ಆಗಮದ ಮೂಗ ಕೊಯಿವೆ' ಎಂದು ಹೇಳುವ ಮೂಲಕ ಆಗಮೋಕ್ತ ಶೈವಧರ್ಮವನ್ನೂ ತಿರಸ್ಕರಿಸಿದ್ದಾರೆ. ವೇದ ಮತ್ತು ಆಗಮಗಳನ್ನು ನಂಬುವ ವೀರಶೈವವನ್ನು ಬಸವಣ್ಣನವರು ಒಪ್ಪಿಕೊಳ್ಳಲು ಸಾಧ್ಯವೆ?



# ಲಿಂಗವಂತ ಧರ್ಮದಲ್ಲಿ ಏನುಂಟು ಏನಿಲ್ಲ?

ಲಿಂಗವಂತ ಧರ್ಮದ ಬಹುಪಾಲು ಅನುಯಾಯಿಗಳು ಕಾಲದ ಪ್ರವಾಹಕ್ಕೆ ಸಿಲುಕಿ ತಮ್ಮ ಧರ್ಮದ ಮೂಲಸತ್ತ್ವದಿಂದ ತಮಗರಿಯದಂತೆಯೆ ದೂರ ಸಾಗುತ್ತಿದ್ದಾರೆ. ಬಹುಶಃ ಜಗತ್ತಿನ ವಿವಿಧ ಧರ್ಮಗಳ ಅನುಯಾಯಿಗಳನೇಕರು ಇಂಥ ವಿಷಮಸ್ಥಿತಿಯ ಗೊಂದಲಗಳ ಮಧ್ಯೆ ಮುಂದುವರಿಯುತ್ತಿದ್ದಾರೆ. ವೈಜ್ಞಾನಿಕ ಮನೋಭಾವದಿಂದ ಕೂಡಿದ ಕಾಯಕಜೀವಿ ಶರಣರ ಬದುಕಿನ ಕ್ರಮದ ಮೂಲಕ ಜೀವನವಿಧಾನವಾದಂಥ ಲಿಂಗವಂತ ಧರ್ಮದ ತಿರುಳನ್ನು ಇಂದು ಪ್ರತಿಯೊಬ್ಬರು ಅರಿತುಕೊಳ್ಳುವುದು ಅವಶ್ಯವಾಗಿದೆ. ಆ ಮೂಲಕ ಹಿಂಸೆ, ಸುಲಿಗೆ ಮತ್ತು ಅಸಮಾನತೆಗಳಿಲ್ಲದ ಶಾಂತಿಯುತವಾದ ಸಮೃದ್ಧ ಬದುಕನ್ನು ಪಡೆಯಬೇಕಿದೆ. ಈ ಹಿನ್ನೆಲೆಯಲ್ಲಿ ಲಿಂಗವಂತ ಧರ್ಮಕ್ಕೆ ಸಂಬಂಧಿಸಿದ ಕೆಲವೊಂದು ಮುಖ್ಯ ಪ್ರಶ್ನೆಗಳಿಗೆ ಉತ್ತರಿಸುವುದು ಅವಶ್ಯವಾಗಿದೆ.

### ಲಿಂಗವಂತ ಧರ್ಮದ ಮೂಲಾಧಾರ ಯಾವುದು?

ಕಾಯಕವೇ ಲಿಂಗವಂತ ಧರ್ಮದ ಮೂಲಾಧಾರವಾಗಿದೆ. ಇಡೀ ನಿಸರ್ಗ ಕಾಯಕದ ಉತ್ಪಾದನೆಯಾಗಿದೆ. ಅಂತೆಯೆ "ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು" ಎಂದು ಹೇಳುವ ಮೂಲಕ ಆಯ್ದಕ್ಕಿ ಮಾರಯ್ಯನವರು 'ಕಾಯಕವೇ ಕೈಲಾಸ' ಎಂದು ತಿಳಿಸಿದ್ದಾರೆ.

'ಲೋಕದ ಚೇಷ್ಟೆಗೆ ರವಿ ಬೀಜ' ಎಂದು ಅಕ್ಕಮಹಾದೇವಿ ಹೇಳುತ್ತಾಳೆ. ಸೃಷ್ಟಿ ರೂಪುಗೊಳ್ಳುವ ಕ್ರಿಯೆಯಲ್ಲಿ ಸೂರ್ಯನ ಪಾತ್ರವನ್ನು ಅಕ್ಕ ಸೂಚಿಸುತ್ತಾಳೆ. ಸೂರ್ಯನದು ಬೆಳಕು ಕೊಡುವ ಕಾಯಕ. ಚಂದ್ರನದು ಬೆಳದಿಂಗಳು ಕೊಡುವ ಕಾಯಕ. ವಾಯುವಿನದು ಸೃಷ್ಟಿಯನ್ನು ಜೀವಂತವಾಗಿಡುವ ಕಾಯಕ, ಭೂಮಿ ಮತ್ತು ಜಲಕ್ಕೆ ನಮ್ಮೆಲ್ಲರನ್ನು ಸಲಹುವ ಕಾಯಕ. ಮೋಡಗಳಿಗೆ ಮಳೆ ಸುರಿಸುವ ಕಾಯಕ, ಲೋಕಕ್ಕೆ ನೀರುಣಿಸುತ್ತ ಸಮುದ್ರ ಸೇರಿ ಉಪ್ಪಿನಾಂಶವನ್ನು ಸಮತೋಲನದಲ್ಲಿ ಇಡುವ ಮೂಲಕ ಜಲಚರಗಳನ್ನು ರಕ್ಷಿಸುವ ಕಾಯಕ ನದಿಯದು. ಹೀಗೆ ಕಾಯಕವು ನಿಸರ್ಗಧರ್ಮವಾಗಿದೆ. ಈ ಪ್ರಕಾರ ಲಿಂಗವಂತ ಧರ್ಮವು ನಿಸರ್ಗಧರ್ಮವಾಗಿರುವುದರಿಂದ ಕಾಯಕವು ಅದರ ಮೂಲಾಧಾರವಾಗಿದೆ.

ಬಸವಧರ್ಮ ಎಂಬ ಲಿಂಗವಂತ ಧರ್ಮವು ಕಾಯಕ ಪ್ರಧಾನ ಧರ್ಮವಾಗಿರುವುದರಿಂದ ಕಾಯಕ ಜೀವಿಗಳೇ ಈ ಧರ್ಮದ ಮೂಲಪುರುಷರು.

ಬಸವಣ್ಣನವರ ಅನುಭವದ ಪಾತ್ರೆಯನ್ನು ತುಂಬಿಸಿದವರೇ ಕಾಯಕಜೀವಿಗಳು. "ಭಕ್ತಿ ಇಲ್ಲದ ಬಡವ ನಾನಯ್ಯಾ. ಕಕ್ಕಯ್ಯನ ಮನೆಯಲ್ಲೂ ಬೇಡಿದೆ; ಚೆನ್ನಯ್ಯನ ಮನೆಯಲ್ಲೂ ಬೇಡಿದೆ" ಎಂದು ಬಸವಣ್ಣನವರು ಮನದುಂಬಿ ಹೇಳಿದ್ದಾರೆ. ಉನ್ನತ ಕುಲ, ಉನ್ನತ ಶಿಕ್ಷಣ, ಉನ್ನತ ವರ್ಗ ಮತ್ತು ಪ್ರಧಾನ ಮಂತ್ರಿಯಂಥ ಉನ್ನತ ಹುದ್ದೆಯನ್ನು ಹೊಂದಿ ಕ್ರಿಯಾಶೀಲರಾಗಿದ್ದ ಬಸವಣ್ಣನವರು ಇವುಗಳನ್ನೆಲ್ಲ ಲೆಕ್ಕಿಸದೆ ಹೀಗೆ ಕೆಳಜಾತೀಕರಣಕ್ಕೆ ಒಳಗಾಗಿ ಬಸವಳಿದ ಜನರ ಕಣ್ಣೀರನ್ನು ಒರೆಸಲು ಮುಂದಾದರು. ಸಕಲ ವೇದ, ಶಾಸ್ತ್ರ, ಉಪನಿಷತ್, ಪುರಾಣ ಮತ್ತು ಆಗಮಗಳಲ್ಲಿ ಪಾರಂಗತರಾಗಿದ್ದರೂ ಹೊಸ ಜಗತ್ತಿನ ಸಿದ್ಧಾಂತ ರೂಪಿಸುವಲ್ಲಿ ಕಾಯಕಜೀವಿಗಳ ಅನುಭವವನ್ನೇ ಪ್ರಮಾಣವಾಗಿ ಸ್ವೀಕರಿಸಿದರು.

ಲಕ್ಷಾಂತರ ಜನರ ಅನುಭವದಿಂದ ಒಂದು ನಾಗರೀಕತೆಯು ನಿರ್ಮಾಣವಾಗುವುದು. ಅವರೆಲ್ಲರ ಅನುಭವದ ಸಾರವಾದ ಅನುಭಾವದಿಂದ ಮಾನವಸಂಸ್ಕೃತಿ ಅರಳುವುದು. ಹೀಗೆ ನಿರ್ಮಾಣವಾದ ನಾಗರೀಕತೆಯಲ್ಲಿ ಅರಳಿದ ಸಂಸ್ಕೃತಿಯಲ್ಲಿ ವಿಶ್ವಮಾನವನ ಉದಯವಾಗುವುದು. ನಮ್ಮ ಬಸವಾದಿ ಶರಣರು ಅಂಥ ವಿಶ್ವಮಾನವರು.

ಕಾಯಕ, ಪ್ರಸಾದ ಮತ್ತು ದಾಸೋಹ ವ್ಯವಸ್ಥೆಯನ್ನು ಲಿಂಗವಂತ ಧರ್ಮ ಹೊಂದಿದೆ. ಗುರು, ಲಿಂಗ ಮತ್ತು ಜಂಗಮಕ್ಕೆಲ್ಲ ಕಾಯಕ ಅವಶ್ಯವಾಗಿದೆ. ಲಿಂಗವಂತ ಧರ್ಮದಲ್ಲಿ ಅರಿವೇ ಗುರು. ಅರಿವಿನ ಮೂಲವಾದ ಸಮತಾ ತತ್ತ್ವವೇ ಲಿಂಗತತ್ತ್ವ. ಸಕಲ ಜೀವಾತ್ಮರಿಂದ ಕೂಡಿರುವ ಲೋಕವೇ ಜಂಗಮ. ಕಾಯಕದಿಂದ ಪಡೆದದ್ದನ್ನು ಲಿಂಗಪ್ರಸಾದವೆಂದು ಸ್ವೀಕರಿಸಬೇಕು. ಆ ಪಡೆದದ್ದನ್ನು ಲಿಂಗದ ವಿರಾಟ್ ಸ್ವರೂಪವಾದ ಸಮಾಜವೆಂಬ ಜಂಗಮಕ್ಕೆ ದಾಸೋಹ ಎಂಬ ಸಾಮಾಜಿಕ ವಿತರಣಾ ವ್ಯವಸ್ಥೆ ಮೂಲಕ ಕೊಟ್ಟು ಅಸಮಾನತೆಯನ್ನು ತೊಡೆದು ಹಾಕಬೇಕು.

ಹೀಗೆ ಕಾಯಕವು ಲಿಂಗವಂತ ಧರ್ಮದ ಮೂಲಾಧಾರವಾಗಿದೆ. 'ಮಾನವನ ಎಲ್ಲ ಇರುವಿಕೆಗೆ ದುಡಿಮೆಯೆ ಮೊಟ್ಟ ಮೊದಲ ಆಧಾರ. ಇದು ಎಷ್ಟರಮಟ್ಟಿಗೆ ನಿಜವೆಂದರೆ ಒಂದರ್ಥದಲ್ಲಿ ದುಡಿಮೆಯೆ ಮನುಷ್ಯನನ್ನು ಸೃಷ್ಟಿಸಿತು' ಎಂದು ೧೯ನೇ ಶತಮಾನದ ಫ್ರೆಡ್ರಿಕ್ ಎಂಗೆಲ್ಸ್ ಅವರು 'ದ ಪಾರ್ಟ್ ಪ್ಲೇಯ್ಡ್ ಬೈ ಲೇಬರ್ ಇನ್ ದ ಟ್ರಾಂಜಿಶನ್ ಫ್ರಾಮ್ ಏಪ್ ಟು ಮ್ಯಾನ್' ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. ವಾನರ ನರ ಆಗುವಲ್ಲಿ ದುಡಿಮೆಯ ಪಾತ್ರ ಹಿರಿದಾಗಿದೆ. ಆತನ ಅನುಭವ ಮತ್ತು ಅನುಭಾವಕ್ಕೆ ಕೂಡ ದುಡಿಮೆಯೆ ಮೂಲ ಕಾರಣವಾಗಿದೆ ಎಂದು ಎಂಗೆಲ್ಸ್ ವಿವರಿಸಿದ್ದಾರೆ. ಕಾರ್ಲ್ ಮಾರ್ಕ್ಸ್ ಮತ್ತು ಎಂಗೆಲ್ಸ್ ಅವರು ೧೯ನೇ ಶತಮಾನದಲ್ಲಿ ರೂಪಿಸಿದ ಸಮತಾವಾದ ಕೂಡ ದುಡಿಯುವ ವರ್ಗದ ಅನುಭವದ ಮೇಲೆಯೆ ನಿಂತಿದೆ.

**ಲಿಂಗವಂತ ಧರ್ಮದಲ್ಲಿ ಅಧ್ಯಾತ್ಮ ಮತ್ತು ಯೋಗದ ಸ್ಥಾನವೇನು?**

ಶರಣರು ಸಕಾರಾತ್ಮಕವಾಗಿ ಅಧ್ಯಾತ್ಮ ಪದಪ್ರಯೋಗ ಮಾಡುವುದಿಲ್ಲ. ಅವರಿಗೆ ಇಷ್ಟಲಿಂಗಪೂಜೆಯೆ ಶಿವಯೋಗವಾಗಿದೆ. ಶರಣರ ಪ್ರಕಾರ ಯೋಗಗಳಲ್ಲಿ ಶಿವಯೋಗವೇ ಪರಿಪೂರ್ಣವಾದುದು.

"ಮಾಡಿ ಮಾಡಿ ನಿತ್ಯ ಲಿಂಗಾರ್ಚನೆಯ,
ಮಾಡಿ ಮಾಡಿ ನಿತ್ಯ ಜಂಗಮಾರ್ಚನೆಯ,
ಮಾಡಿ ಮಾಡಿ ಎಂದು ವಿಸ್ತಾರವೆಂದು ಮಾಡಿ ಕೂಡಿದವರೆಲ್ಲ ನಿತ್ಯರಾದರು.
ಮಾಡದೆ, ಕೂಡದೆ ಯೋಗವೆಂದು
ಅಧ್ಯಾತ್ಮವ ನುಡಿದು ಶಿವಪೂಜೆಗೆ ದೂರವಾಗಬೇಡ,
ಅಲ್ಲದೆ ಕೆಲವರೊಳಗೆ ಆಡಿ ಕಪಿಲಸಿದ್ಧಮಲ್ಲಿಕಾರ್ಜುನನ ಚಿತ್ತಕ್ಕೆ ದೂರವಾಗದೆ
ಶಿವಾರ್ಚನೆಯ ಮಾಡಿದಡೆ ದಿವ್ಯಯೋಗಿಯಪ್ಪೆ"

ಎಂದು ಸಿದ್ಧರಾಮೇಶ್ವರರು ಹೇಳುವ ಮೂಲಕ ಇಷ್ಟಲಿಂಗಯೋಗದ ರಹಸ್ಯವನ್ನು ತಿಳಿಸುತ್ತಾರೆ. ಲಿಂಗವಂತ ಧರ್ಮದಲ್ಲಿ ಎರಡು ಪ್ರಕಾರದ ಶಿವಯೋಗ ವಿಧಾನಗಳಿವೆ. ಮೊದಲನೆಯದು ಆತ್ಮಕಲ್ಯಾಣಕ್ಕಾಗಿ ಇರುವ ಇಷ್ಟಲಿಂಗಯೋಗ. ಎರಡನೆಯದು ಲೋಕಕಲ್ಯಾಣಕ್ಕಾಗಿ ಇರುವ ಜಂಗಮಲಿಂಗಯೋಗ. ಇಷ್ಟಲಿಂಗಯೋಗದಲ್ಲಿ ಶರಣರು ಇಡೀ ವಿಶ್ವವನ್ನು ತಮ್ಮೊಳಗೆ ತುಂಬಿಕೊಳ್ಳುತ್ತಾರೆ. ಇದುವೆ ಲಿಂಗಾರ್ಚನೆ. ತಮ್ಮೊಳಗಿನ ಮಹಾಘನದ ಜೊತೆ ಅವರು ಒಂದಾದಾಗ ಆ ಮಹಾಘನದ ಒಂದಂಶವಾದ ಇಡೀ ವಿಶ್ವ ಅವರೊಳಗೆ ಸಹಜವಾಗಿಯೆ ಒಂದಾಗುವುದು. ವಿಶ್ವದ ಪ್ರತಿಯೊಂದು ಅಂಶದಲ್ಲಿ ತಾವು ತಮ್ಮೊಳಗಿನ ಘನದ ಜೊತೆಗೂಡಿ ಇರುವ ಸತ್ಯದ ಅರಿವಾಗುವುದು. ಆಗ ಅವರಿಗೆ ಎಲ್ಲವೂ ಶಿವಸ್ವರೂಪವಾಗೇ ಕಾಣತೊಡಗುವುದು. ಸಕಲಜೀವಾತ್ಮರಿಗೆ ಲೇಸನೆ ಬಯಸಿ ಕಾರ್ಯೋನ್ಮುಖವಾಗುವುದೇ ಜಂಗಮಯೋಗ. ಇದುವೆ ಜಂಗಮಾರ್ಚನೆ. ಅಂದರೆ ಲೋಕಕಲ್ಯಾಣಕ್ಕಾಗಿ ಕಾಯಕ, ಪ್ರಸಾದ ಮತ್ತು ದಾಸೋಹಂಭಾವದೊಂದಿಗೆ ಜೀವಿಸುತ್ತ ಸರ್ವಸಮತ್ವದ ವ್ಯವಸ್ಥೆಗಾಗಿ ಬದುಕನ್ನೇ ಮುಡಿಪಿಡುವುದು. ಹೀಗೆ ಆತ್ಮಾನುಸಂಧಾನ ಮತ್ತು ಲೋಕಾನುಸಂಧಾನದೊಂದಿಗೆ ಕ್ರಿಯಾಶೀಲವಾಗಿ ಬದುಕುವವರೇ ದಿವ್ಯಯೋಗಿಗಳು. ಇದುವೆ ಶಿವಾರ್ಚನೆ. ಅಂದರೆ ಒಳಲೋಕ ಮತ್ತು ಹೊರಲೋಕ ಒಂದಾಗಿಸಿ ಸಮತೆಯನ್ನು ಸಾಧಿಸುವುದು.

"ಲಿಂಗಾರ್ಚನಂ ನ ಕರ್ತವ್ಯಂ, ಜಂಗಮಾರ್ಚನಂ ಕರ್ತವ್ಯಂ" ಎಂದು ಬಸವಣ್ಣನವರು ತಿಳಿಸಿದ್ದಾರೆ. ನಮ್ಮ ಆತ್ಮೋದ್ಧಾರ ಕರ್ತವ್ಯವಲ್ಲ. ಅದು ಸ್ವಸಂತೋಷಕ್ಕಾಗಿ ಇರುವಂಥದ್ದು. ಲೋಕೋದ್ಧಾರವೇ ಕರ್ತವ್ಯ. ಅದುವೇ ಜಂಗಮಾರ್ಚನ. "ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ. ಎನ್ನೊಳಗಿದ್ದು ನಿನ್ನ ತೋರಲಿಕೆ ನೀನೆ ರೂಪಾದೆ. ಇನ್ನು ಜಂಗಮವೇ ಲಿಂಗವೆಂದು ನಂಬಿದೆ" ಎಂದು

ಹೇಳುವ ಮೂಲಕ ಬಸವಣ್ಣನವರು ಸಕಲಜೀವಾತ್ಮರ ಸಮೂಹವೇ ದೇವರೆಂದು ಸೂಚಿಸುತ್ತಾರೆ. ಇಂಥ ಪ್ರಜ್ಞೆಯನ್ನು ಹೊಂದುವ ಉದ್ದೇಶದಿಂದ ಅಂತರಂಗದ ಅರಿವನ್ನು ಪಡೆಯುವುದಕ್ಕಾಗಿಯೇ ಇಷ್ಟಲಿಂಗ ಪೂಜೆ ಇರುವುದು. ಸಮರತಿ (ಹೆಣ್ಣು ಗಂಡು ಸಮಾನ), ಸಮಕಳೆ (ಕೆಳಜಾತಿ ಮತ್ತು ಮೇಲ್ಜಾತಿ ಸಮಾನ) ಸಮಸುಖ (ಬಡವರು ಮತ್ತು ಶ್ರೀಮಂತರು ಸಮಾನ) ಎಂಬುದನ್ನು ಅರಿಯುವುದೇ ಇಷ್ಟಲಿಂಗ ಪೂಜಾಫಲ ಎಂದು ಬಸವಣ್ಣನವರು ಸಾರಿದ್ದಾರೆ.

ಎಲ್ಲ ಜೀವಗಳ ಮಧ್ಯೆ ಸಮಾನತೆಯನ್ನು ಸಾಧಿಸಬೇಕಿದೆ. "ಅರಿವೇ ಗುರು, ಆಚಾರವೇ ಶಿಷ್ಯ, ಜ್ಞಾನವೇ ಲಿಂಗ, ಪರಿಣಾಮವೇ ತಪ, ಸಮತೆ ಎಂಬುದೇ ಯೋಗದಾಗು ನೋಡಾ" ಎಂದು ಹಾವಿನಾಳ ಕಲ್ಲಯ್ಯನವರು ಸಮತಾವಾದದ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ಗುಹೆಗಳಲ್ಲಿ, ಅರಣ್ಯಗಳಲ್ಲಿ ಮತ್ತು ಹಿಮಾಲಯದಂಥ ಪರ್ವತಗಳಲ್ಲಿ ಏಕಾಂಗಿಯಾಗಿ ಉಳಿದು ಧ್ಯಾನಿಸುತ್ತ ಅಧ್ಯಾತ್ಮ ಸಾಧನೆ ಮಾಡುವುದನ್ನು ಶರಣರು ಅಲ್ಲಗಳೆಯುತ್ತಾರೆ. ಲಿಂಗವಂತ ಧರ್ಮದಲ್ಲಿ ಇಂಥ ಅಧ್ಯಾತ್ಮದ ಬದಲು ಅನುಭಾವದ ಪರಿಕಲ್ಪನೆ ಇದೆ. ಈ ಅನುಭಾವವನ್ನು ಹಿಮಾಲಯಕ್ಕೆ ಹೋಗಿ ಪಡೆದುಕೊಳ್ಳುವಂಥದ್ದಲ್ಲ. ಕಾಯಕದ ಅನುಭವದ ಮೂಲಕ ಸಾಧಿಸುವಂಥದ್ದು. ಅನೇಕ ಶರಣರು ಅನುಭಾವವನ್ನು ಸೂಚಿಸಲು ತಮ್ಮ ದೈನಂದಿನ ಕಾಯಕದ ಅನುಭವ ಮತ್ತು ಆ ಕಾಯಕಕ್ಕೆ ಬೇಕಾದ ವಸ್ತುಗಳನ್ನೇ ಬಳಸುತ್ತಾರೆ. "ಹದ ಮಣ್ಣಲ್ಲದೆ ಮಡಕೆಯಾಗದು" ಎಂದು ಕುಂಬಾರ ಗುಂಡಯ್ಯನವರ ಪುಣ್ಯಸ್ತ್ರೀ ಕೇತಲದೇವಿ ಹೇಳುತ್ತಾಳೆ. "ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ" ಎಂದು ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ತಿಳಿಸುತ್ತಾಳೆ. ಈ ರೀತಿ ಶರಣರು ಅನುಭವದ ಮೂಲಕ ಅನುಭಾವವನ್ನು ಸಾಧಿಸುತ್ತಾರೆ. 'ಬದುಕು ಹದಗೊಂಡಾಗಲೆ ಭಕ್ತನ ವ್ಯಕ್ತಿತ್ವ ವಿಕಸನಗೊಳ್ಳುತ ಸಾಗುವುದು. ಕೊನೆಯಲ್ಲಿ ಆತ ಐಕ್ಯಸ್ಥಲವನ್ನು ತಲುಪುವನು.' ಎಂಬುದನ್ನು ಕೇತಲದೇವಿ ಸೂಚಿಸುತ್ತಾಳೆ. 'ಅದಕ್ಕಾಗಿ ಎಚ್ಚರಿಕೆಯಿಂದ ಬದುಕದಿದ್ದರೆ ಅನಾಹುತವಾಗುವುದು' ಎಂದು ಕಾಳವ್ವೆ ತಿಳಿಸುತ್ತಾಳೆ. ಹೀಗೆ ಅನ್ಯೋಕ್ತಿಗಳ ಮೂಲಕ ಶರಣರು ಅನುಭಾವದ ಮಟ್ಟಕ್ಕೆ ಏರುವುದನ್ನು ತಿಳಿಸುತ್ತಾರೆ. ಶರಣರ ಪ್ರಕಾರ ವಸ್ತುಜಗತ್ತಿನ ಅನುಭವವಿಲ್ಲದೆ ಪರವಸ್ತುವಿನ ಅನುಭಾವ ಆಗದು.

**ಲಿಂಗವಂತ ಧರ್ಮದಲ್ಲಿ ಗುರು-ಶಿಷ್ಯ ಸಂಬಂಧ ಎಂತಹುದು?**

ಈ ಧರ್ಮದ ಪ್ರಕಾರ ಅರಿವನ್ನುಂಟುಮಾಡುವವರೆಲ್ಲ ಗುರುಗಳೇ. ಈ ಧರ್ಮದಲ್ಲಿನ ಗುರು-ಶಿಷ್ಯ ಸಂಬಂಧ ಲೋಕಕ್ಕೇ ಮಾದರಿಯಾಗಿದೆ. "ಅಜಕೋಟಿ ಕಲ್ಪವರುಷದವರೆಲ್ಲರು ಹಿರಿಯರೆ?" ಎಂದು ಚೆನ್ನಬಸವಣ್ಣನವರು ಪ್ರಶ್ನಿಸಿದ್ದಾರೆ. ಅರಿವುಳ್ಳವರೇ ಹಿರಿಯರು ಎಂದು ಸೂಚಿಸಿದ್ದಾರೆ. "ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನೆ; ಹಿಂದ ಬಿಟ್ಟು ಮುಂದ ಹಿಡಿಯಲೇಬೇಕು. ಕೂಡಲಸಂಗಮದೇವ

ಕೇಳಯ್ಯಾ, ಕಿಚ್ಚಿನೊಳಗೆ ಕೋಲ ಬಯ್ಚಿಟ್ಟಂತಿರಬೇಕು" ಎಂದು ಬಸವಣ್ಣನವರು ಹೇಳಿದ್ದಾರೆ. ಎರಡು ಕೋಲುಗಳನ್ನು ಕಿಚ್ಚಿನಲ್ಲಿ ಇಟ್ಟಾಗ ಅವು ನಿಗಿನಿಗಿಯಾಗಿ ಒಂದೇ ಆಗಿರುತ್ತವೆ. ಜ್ಯೋತಿ ಮುಟ್ಟಿ ಜ್ಯೋತಿಯಾದಾಗ ಎರಡೂ ಒಂದೇ ತೆರನಾದ ಪ್ರಕಾಶವನ್ನೇ ಕೊಡುತ್ತವೆ.

**ಲಿಂಗವಂತ ಧರ್ಮದಲ್ಲಿ ಪೂಜಾರ್ಹ ವಸ್ತು ಯಾವುದು?**

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ಮಾತ್ರ ಪೂಜಾರ್ಹ ವಸ್ತು. ಇಷ್ಟಲಿಂಗವು ಅರಿವಿನ ಕುರುಹು ಆಗಿದೆ. "ಅರಿಯದ ಕಾರಣ ಕುರುಹುವಿಡಿವೆನಲ್ಲದೆ ಅರಿದ ಬಳಿಕ ಇನ್ನೇನೊ?" ಎಂದು ಅಲ್ಲಮಪ್ರಭುಗಳು ಪ್ರಶ್ನಿಸುತ್ತಾರೆ. ಇಷ್ಟಲಿಂಗವೇ ದೇವರಲ್ಲ. ಲಿಂಗದೇವನ ಕುರುಹು. ಲಿಂಗವಂತ ಧರ್ಮದಲ್ಲಿ ದೇವರ ಹೆಸರು ಲಿಂಗದೇವ ಎಂದಿದೆ. ಶರಣರು ಶಿವ ಮುಂತಾದ ಶಬ್ದಗಳನ್ನು ಕೇವಲ ರೂಢಿಗತವಾಗಿ ಬಳಸಿದ್ದಾರೆ. ಇದರ ಅರ್ಥ ಕೂಡಲಸಂಗಮದೇವ ವಚನಾಂಕಿತವನ್ನು ಲಿಂಗದೇವ ಎಂದು ತಿದ್ದಬೇಕು ಎಂದಲ್ಲ. ಆ ಕೂಡಲಸಂಗಮದೇವ ವಚನಾಂಕಿತವು ಬಸವಣ್ಣನವರ ಸಿಗ್ನೆಚರ್ ಆಗಿದೆ ಎಂಬುದನ್ನು ಮರೆಯಬಾರದು. ಕೂಡಲಸಂಗಮದೇವನಿಗೆ ಎಲ್ಲಿಯೂ ಗುಡಿ ಇಲ್ಲ. ಕೂಡಲಸಂಗಮದಲ್ಲಿರುವುದು ಸಂಗಮೇಶ್ವರ/ಸಂಗಮನಾಥ ದೇವಸ್ಥಾನವೇ ಹೊರತು ಕೂಡಲಸಂಗಮ ದೇವಸ್ಥಾನವಲ್ಲ. "ತೋರಲಿಲ್ಲದ ಸಿಂಹಾಸನದ ಮೇಲೆ ಹೇಳಬಾರದ ಘನವು ಬಂದೆರಗಿದಡೆ ತೋರಿ ಮೆರೆವ ಸಂಗಮನಾಥನು ಎದ್ದು ಹೋದನು" ಎಂದು ಬಸವಣ್ಣನವರು ಕೂಡಲಸಂಗಮದಲ್ಲಿನ ಸ್ಥಾವರಲಿಂಗವನ್ನು ಅಲ್ಲಗಳೆದಿದ್ದಾರೆ.

ಶರಣರು ತಮ್ಮೊಳಗಿನ ಲಿಂಗದೇವನ ಅನುಸಂಧಾನಕ್ಕಾಗಿ ಇಷ್ಟಲಿಂಗವೆಂಬ ಮಾಧ್ಯಮವನ್ನು ಬಳಸಿದರು. ಆ ಮೂಲಕ ತಮ್ಮೊಳಗೇ ಇರುವ ಮಹಾಘನದ ಜೊತೆ ಒಂದಾದರು. ಹೀಗೆ ಒಂದಾಗುವುದೇ ಇಷ್ಟಲಿಂಗಯೋಗ (ಶಿವಯೋಗ). ಆದ್ದರಿಂದ ಲಿಂಗವಂತ ಧರ್ಮದಲ್ಲಿ ಪೂಜೆ ಇಲ್ಲ. ಆದರೆ ಪೂಜೆ ಮಾಡಿಕೊಳ್ಳುವುದು ಇದೆ. ಪೂಜೆ ಮಾಡಿಕೊಳ್ಳುವುದೆಂದರೆ ತಮ್ಮೊಳಗಿನ ಘನದ ಜೊತೆ ಶೂನ್ಯ (ಪೂಜಿ) ಆಗುವುದು. ಹೀಗೆ ಶರಣರು ಐಹಿಕ ವಸ್ತುಗಳನ್ನು ತಮ್ಮ ಮನಸ್ಸಿನಿಂದ ದೂರವಿಟ್ಟು ಶೂನ್ಯ ಮಾಡಿಕೊಳ್ಳುತ್ತಿದ್ದರು. ಲಿಂಗವಂತ ಜ್ಞಾನಿಗಳು 'ಪೂಜೆ ಮಾಡಿರಿ' ಎಂದು ಹೇಳುವುದಿಲ್ಲ. 'ಪೂಜೆ ಮಾಡಿಕೊಳ್ಳಿರಿ' ಎಂದು ಹೇಳುತ್ತಾರೆ.

ದೇವರು ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಎಂದು ಬಸವಣ್ಣನವರು ಹೇಳಿದ್ದಾರೆ. ರೂಪಿಲ್ಲದ ವಿಶ್ವಚೇತನವಾಗಿರುವ ಇಷ್ಟಲಿಂಗವು ಲಿಂಗದೇವ ಎಂಬ ಅರಿವಿನ ಕುರುಹು ಹೊರತಾಗಿ ಮೂರ್ತಿ ಅಲ್ಲ. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಮೂರ್ತಿಪೂಜೆ ನಿಷಿದ್ಧ. ಮೂರ್ತಿಯೇ ಇಲ್ಲವೆಂದಮೇಲೆ ಮಂದಿರದ ಪ್ರಶ್ನೆಯೇ ಇಲ್ಲ. ದೇಹವೇ ದೇಗುಲವಾಗಿರುವುದರಿಂದ ದೇವರು ನಮ್ಮೊಳಗೇ ಇದ್ದಾನೆ. ನಾವೆಲ್ಲ ಜೀವಂತ ಮಂದಿರಗಳೇ ಆಗಿದ್ದೇವೆ.

ಸಮಷ್ಟಿಯನ್ನು ವ್ಯಷ್ಟಿಯಲ್ಲಿ ಒಂದಾಗಿಸಿ ಲೋಕಕಲ್ಯಾಣದಲ್ಲಿ ತೊಡಗುವುದೇ ಲಿಂಗವಂತನು ದೇವರನ್ನು ಮೆಚ್ಚಿಸುವ ಕ್ರಮ. ಲಿಂಗಾಯತ ಎಂದರೆ 'ಲಿಂಗಧಾರಣೆ ಮಾಡಿದವನು' ಎಂಬುದು ಸಾಮಾನ್ಯ ಅರ್ಥವಾದರೆ. 'ಲಿಂಗಕ್ಕೆ ಪ್ರಿಯನಾದವನು' ಎಂಬುದು ಅದರ ತಾತ್ತ್ವಿಕ ಅರ್ಥವಾಗಿದೆ. (ಆಯತ ಎಂದರೆ ಪ್ರಿಯ ಎಂಬ ಅರ್ಥವೂ ಇದೆ.)

ಈ ಧರ್ಮದಲ್ಲಿ ಬಸವಾದಿ ಶರಣರು ಗೌರವಾರ್ಹವಾಗಿದ್ದಾರೆ. ಬಸವಾದಿ ಶರಣರ ಪಾದಸ್ಪರ್ಶದಿಂದಾಗಿ ಬಾಗೇವಾಡಿ, ಕೂಡಲಸಂಗಮ, ಕಲ್ಯಾಣ ಮುಂತಾದವು ಸ್ಫೂರ್ತಿಯ ತಾಣಗಳಾಗಿವೆ. ಶರಣರಿಗೆ ಇಡೀ ಭೂಲೋಕವೇ ಶ್ರದ್ಧಾ ಕೇಂದ್ರವಾಗಿದೆ. ಏಕೆಂದರೆ ಇದು ಕರ್ತಾರನ ಕಮ್ಮಟವಾಗಿದೆ.

**ಲಿಂಗವಂತರು ಪೂಜೆಗಾಗಿ ತೆಂಗು, ಲಿಂಬೆಹಣ್ಣು, ಬೂದುಗುಂಬಳ ಬಳಸುವುದು ಸರಿಯೆ?**

ಅದು ಹೇಗೆ ಸರಿಯಾಗುತ್ತದೆ? ಬಲಿಪ್ರಜ್ಞೆಯ ಶಾಖಾಹಾರಿಗಳು ಇವುಗಳನ್ನು ಬಲಿಯ ವಸ್ತುಗಳನ್ನಾಗಿ ಪರಿವರ್ತಿಸಿದ್ದಾರೆ. ನಮ್ಮ ದೇಶದಲ್ಲಿ ನರಬಲಿ, ಪ್ರಾಣಿಬಲಿ ಮತ್ತು ಪಕ್ಷಿಬಲಿ ಇರುವಂತೆಯೆ ಇಂಥ ಕಾಯಿಗಳನ್ನು ಮತ್ತು ಹಿಟ್ಟಿನ ಮೂರ್ತಿಗಳನ್ನು ಕೂಡ ಬಲಿ ಕೊಡಲು ಬಳಸುತ್ತಾರೆ. ದೇವರ ಮುಂದೆ ಕಾಯಿಗಳನ್ನು ಒಡೆಯುವುದು ಬಲಿ ಸಂಪ್ರದಾಯ ಎಂಬುದನ್ನು ಜನ ಮರೆತಿದ್ದರೂ ಅದು ಸುಪ್ತಪ್ರಜ್ಞೆಯಲ್ಲಿ ಹಾಗೇ ಉಳಿದುಕೊಂಡು ಬಂದಿದೆ. ಬಸವಣ್ಣನವರು ಇಂಥ ಬಲಿಯನ್ನೂ ನಿಷೇಧಿಸಿದ್ದರು. ಬಸವಣ್ಣನವರು ಸೃಷ್ಟಿಸಿದ ಇಷ್ಟಲಿಂಗ ಪೂಜೆಯಲ್ಲಿ ತೆಂಗಿನಕಾಯಿ, ಲಿಂಬೆಕಾಯಿ ಮತ್ತು ಕುಂಬಳಕಾಯಿ ಅಥವಾ ಹಿಟ್ಟಿನ ಮೂರ್ತಿಗಳ ಬಳಕೆಯಾಗುವುದಿಲ್ಲ. ಇಷ್ಟಲಿಂಗಕ್ಕೆ ಯಾರೂ ಹರಕೆ ಹೊರುವುದಿಲ್ಲ. ಬೆಳ್ಳಿಯ ತೊಟ್ಟಿಲು, ಬಂಗಾರದ ಬಟ್ಟಲು, ವಜ್ರದ ಕಣ್ಣುಗಳು ಅದಕ್ಕೆ ಬೇಕಿಲ್ಲ. ಯಾವುದೇ ಖರ್ಚಿಲ್ಲದ ಪೂಜಾ ವಿಧಾನ ಅದು! ಉಳಿದ ಪೂಜೆಗಳು ಬಡವರ ಆರ್ಥಿಕ ವ್ಯವಸ್ಥೆಯನ್ನೇ ಹದಗೆಡಿಸಿವೆ.

**ಲಿಂಗವಂತ ಧರ್ಮದಲ್ಲಿ ಸ್ವಾಮಿಗಳು ಇದ್ದಾರೆಯೆ? ಮಠಗಳು ಇವೆಯೆ?**

"ಸ್ವಾಮಿ ನೀನು ಶಾಶ್ವತ ನೀನು" ಎಂದು ಬಸವಣ್ಣನವರು ಹೇಳುತ್ತಾರೆ. ಅರಿವೇ ಗುರು, ಗುರುವೇ ದೇವರು, ದೇವರೇ ಸ್ವಾಮಿ, ಆ ಸ್ವಾಮಿಯೇ ಶಾಶ್ವತ. ಉಳಿದೆಲ್ಲವೂ ಕಾಲಮಿತಿಯೊಂದಿಗೆ ಅಸ್ತಿತ್ವದಲ್ಲಿರುವಂಥವು. ದೇವರನ್ನು ಬಿಟ್ಟು ಸೂರ್ಯ ಚಂದ್ರ ಮೊದಲುಮಾಡಿ ಸಕಲವೂ ಮರಣಕ್ಕೆ ಒಳಗಾಗುವಂಥವು. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಸ್ವಾಮಿಗಳಿಲ್ಲ. ಆದರೆ ತತ್ತ್ವಜಂಗಮರು ಇದ್ದಾರೆ. ಅವರು ಲಿಂಗವಂತ ಧರ್ಮದ ತತ್ತ್ವವನ್ನು ಜನಮನಗಳಲ್ಲಿ ಬಿತ್ತುವವರು.

ಲಿಂಗವಂತ ಧರ್ಮದಲ್ಲಿ ಮಠಗಳಿಲ್ಲ. ಅವುಗಳಿಗೆ ಪರ್ಯಾಯವಾಗಿ ಮಹಾಮನೆ ಇದೆ. ಈ ಮಹಾಮನೆಯ ಪರಿಕಲ್ಪನೆಯು ಸಕಲಜೀವಾತ್ಮರಿಗೆ ಲೇಸನೆ ಬಯಸುವಂಥದ್ದಾಗಿದೆ. ಲಿಂಗವಂತ ಧರ್ಮದ ಗುರಿ ಲೋಕಕಲ್ಯಾಣವಾಗಿದೆ. ಅಂತೆಯೆ ಇಲ್ಲಿ ಜಂಗಮಕ್ಕೆ ಬಹಳ ಮಹತ್ವವಿದೆ. ಜಂಗಮಕ್ಕೆ ಅನೇಕ ಅರ್ಥಗಳಿವೆ. ಲೋಕ, ಸಮಾಜ, ವಚನಗಳಲ್ಲಿನ ಲಿಂಗತತ್ತ್ವ ಪ್ರತಿಪಾದಕ, ಚೈತನ್ಯ ಮುಂತಾದ ಅರ್ಥಗಳನ್ನು ಅದು ಹೊಂದಿದೆ.

ಶರಣರ ಮೂಲ ಉದ್ದೇಶ ಈ ಬದುಕನ್ನು ಹಸನುಗೊಳಿಸುವಂಥದ್ದಾಗಿತ್ತು. ಅನುಭಾವದ ನೆಲೆಯಲ್ಲಿ ಸುಲಿಗೆ ಇಲ್ಲದ ಮತ್ತು ಸರ್ವರಿಗೂ ಘನತೆವೆತ್ತ ಬದುಕನ್ನು ಒದಗಿಸುವ ಸಮಾಜ ನಿರ್ಮಾಣವೇ ಅವರ ಗುರಿಯಾಗಿತ್ತು. ಆದ್ದರಿಂದ ಅವರ ಅನುಭಾವದ ಬದುಕು (ಸ್ಪಿರಿಚ್ಯುವಲ್ ಲೈಫ್) ಜೀವನಪ್ರೇಮದಿಂದ ಕೂಡಿದ್ದು ಸರ್ವಜೀವದಯಾಪಾರವಾಗಿತ್ತು.

**ಲಿಂಗವಂತ ಧರ್ಮದಲ್ಲಿ ಪಾದಪೂಜೆ ಮತ್ತು ಪಾದೋದಕ ಸೇವನೆಯ ಸಂಪ್ರದಾಯ ಇದೆಯೆ?**

ಸ್ವಾಮಿಗಳೇ ಇಲ್ಲವೆಂದಮೇಲೆ ಅವರ ಪಾದಗಳು ಎಲ್ಲಿಂದ ಬರುವವು? ಮುಂಬರುವ ದಿನಗಳಲ್ಲಿ ಸ್ವಾಮಿಗಳು ಜಾತಿಜಂಗಮತ್ವವನ್ನು ಕಳೆದುಕೊಂಡು ತತ್ತ್ವಜಂಗಮರಾಗಿ ಬಸವಾದಿ ಶರಣರ ತತ್ತ್ವಗಳನ್ನು ಪ್ರಚಾರ ಮಾಡುವ ಸಂದರ್ಭದಲ್ಲೂ ಪಾದಪೂಜೆ ಮತ್ತು ಪಾದೋದಕ ಸೇವನೆ ಸಲ್ಲದು. ಲಿಂಗವಂತ ಧರ್ಮದಲ್ಲಿ ಪಾದಪೂಜೆ ಎಂದರೆ ಜ್ಞಾನದ ಪೂಜೆ. ಪಾದ ಎಂಬ ಶಬ್ದಕ್ಕೆ ಕಿರಣ, ಹೊಳವು ಮತ್ತು ಜ್ಞಾನ ಎಂಬ ಅರ್ಥಗಳೂ ಇವೆ ಎಂಬುದನ್ನು ಮರೆಯಬಾರದು. 'ನಿಮ್ಮ ಶ್ರೀಪಾದಕ್ಕೆ ಶರಣೆಂಬೆ' ಎಂದರೆ 'ನಿಮ್ಮ ಜ್ಞಾನಸಂಪತ್ತಿಗೆ ಶರಣು' ಎಂದರ್ಥ. ಈ ಶರಣ ಧರ್ಮವು ಬಾಗಿದ ಶಿರ ಮತ್ತು ಮುಗಿದ ಕೈಗಳೊಂದಿಗೆ ಶರಣು ಶರಣಾರ್ಥಿ ಎಂದು ಗೌರವ ಸೂಚಿಸುವ ಧರ್ಮವಾಗಿದೆ. ಸರ್ವರು ಶಿವಸ್ವರೂಪಿಗಳೇ ಆಗಿರುವುದರಿಂದ ಯಾರು ಯಾರ ಕಾಲಿಗೆ ಬೀಳುವುದು? ಎದುರಿಗೆ ಇರುವವರ ಒಳಗಿನ ಶಿವಸ್ವರೂಪಕ್ಕೆ ಒಬ್ಬರಿಗೊಬ್ಬರು ಶರಣು ಶರಣಾರ್ಥಿ ಎನ್ನುತ್ತಾರೆ. ಪಾದೋದಕ ಎಂದರೆ ಜ್ಞಾನೋದಕ. ಜ್ಞಾನವೇ ಲಿಂಗವಾದ ಕಾರಣ ಚೆನ್ನಬಸವಣ್ಣನವರು "ಪಾದೋದಕವೆಂಬುದು ಲಿಂಗಕ್ಕೆ ಮಜ್ಜನಕ್ಕೆರೆದುದು" ಎಂದು ಸ್ಪಷ್ಟಪಡಿಸಿದ್ದಾರೆ. ಆದರೂ ಬಹುಪಾಲು ಸ್ವಾಮಿಗಳು ಈ ಸತ್ಯವನ್ನು ಭಕ್ತರಿಗೆ ವಿವರಿಸಿ ಹೇಳುತ್ತಿಲ್ಲ.

**ಹಾಗಾದರೆ ಮಠಗಳು ಬೇಡವೆ?**

ಖಂಡಿತ ಬೇಕು. ಆದರೆ ಅವೆಲ್ಲ ಮಹಾಮನೆಗಳಾಗಿ ಪರಿವರ್ತನೆಗೊಳ್ಳಬೇಕು. ಸ್ವಾಮಿಗಳೆಲ್ಲ ಸೇರಿ ವಚನಗಳಲ್ಲಿನ ಸರ್ವಸಮತ್ವದ ಲಿಂಗತತ್ತ್ವವನ್ನು ಜನಸಮುದಾಯದ ಬದುಕಿನ ಮೂಲ ಸೆಲೆಯಾಗಿಸುವಲ್ಲಿ

ಕಾರ್ಯೋನ್ಮುಖರಾಗಬೇಕು. ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣ ಮುಂತಾದ ವೃತ್ತಿಪರ ಸಂಸ್ಥೆಗಳನ್ನು ಸ್ಥಾಪಿಸಲು ಬಂಡವಾಳಶಾಹಿಗಳು ತುದಿಗಾಲ ಮೇಲೆ ನಿಂತಿದ್ದಾರೆ. ಆದ್ದರಿಂದ ಸಂಪದ್ಭರಿತ ಮಠಗಳ ಸ್ವಾಮಿಗಳು ಆ ಕಡೆ ಗಮನ ಹರಿಸಬೇಕಿಲ್ಲ. ಇಂದು ಜನಸಮುದಾಯಕ್ಕೆ ಬೇಕಿರುವುದು ಅನುಭವ ಮತ್ತು ಅನುಭಾವಪೂರ್ಣ ಬದುಕಿನ ಶಿಕ್ಷಣ. ಶರಣರ ವಚನಗಳು ಅಂಥ ಶಿಕ್ಷಣದ ಆಗರವಾಗಿವೆ. ಈ ಜೀವಪರ ಶಿಕ್ಷಣ ಪಡೆಯದೆ ಬದುಕುವುದು ಪ್ರಾಣಿಸದೃಶವಾಗುತ್ತದೆ. ಧನಾಢ್ಯರು ಮಾಡಲು ಮುಂದೆ ಬರದ ಈ ಮಹಾಕಾರ್ಯವನ್ನು ಸ್ವಾಮಿಗಳು ತತ್ತ್ವಜಂಗಮರಾಗಿ ಮಾಡಬೇಕು.

**ಲಿಂಗವಂತ ಧರ್ಮದಲ್ಲಿ ಸ್ವರ್ಗ, ನರಕ, ಪುಣ್ಯ, ಪಾಪ, ಪುನರ್ಜನ್ಮ, ಮೋಕ್ಷ ಇವೆಯೆ?**

ಇವೆಲ್ಲವುಗಳ ತಾಯಿಬೇರು ಕರ್ಮಸಿದ್ಧಾಂತ. ಕರ್ಮಸಿದ್ಧಾಂತದ ಪುಷ್ಪಗಳಿವು. ಬಸವಣ್ಣನವರು ಕರ್ಮಸಿದ್ಧಾಂತವನ್ನೇ ಕೊಚ್ಚಿಹಾಕಿ 'ಕರ್ಮಹರ ಬಸವ' ಎನಿಸಿದ್ದಾರೆ. "ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆಯದೇಕೊ?" ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಈ ಧರ್ಮದಲ್ಲಿ ಆಚಾರವೇ ಸ್ವರ್ಗ, ಅನಾಚಾರವೇ ನರಕ, ಸ್ವರ್ಗದ ಆಸೆ ಮತ್ತು ನರಕದ ಭಯ ಹುಟ್ಟಿಸುವ ಪುಣ್ಯ ಪಾಪಗಳಿಗೆ ಇಲ್ಲಿ ಸ್ಥಾನವಿಲ್ಲ. "ಪುಣ್ಯ ಪಾಪವೆಂಬ ಉಭಯಕರ್ಮವನಾರು ಬಲ್ಲರಯ್ಯಾ? ಇವನಾರುಂಬರು? ಕಾಯ ತಾನುಂಬಡೆ ಕಾಯ ತಾ ಮಣ್ಣು. ಜೀವ ತಾನುಂಬಡೆ ಜೀವ ತಾ ಬಯಲು." ಎಂದು ಹೇಳುವ ಮೂಲಕ ಪುಣ್ಯ ಪಾಪಗಳ ಜೊತೆ ಪುನರ್ಜನ್ಮ ಮತ್ತು ಮೋಕ್ಷವನ್ನೂ ಹೊಡೆದು ಹಾಕಿದ್ದಾರೆ.

ಲಿಂಗವಂತ ಧರ್ಮದಲ್ಲಿ ಇಷ್ಟಲಿಂಗ ದೀಕ್ಷೆಯೆ ಪುನರ್ಜನ್ಮ. "ಕೂಡಲಸಂಗನ ಶರಣರು ಅಚ್ಚ ಲಿಂಗೈಕ್ಯರು" ಎಂದು ಬಸವಣ್ಣನವರು ಹೇಳುತ್ತಾರೆ. ಅಂದರೆ ಶರಣರು ಬದುಕಿರುವಾಗಲೇ ಮೋಕ್ಷ ಸಾಧನೆ ಮಾಡಿದವರು. ಆದ್ದರಿಂದ ಲಿಂಗವಂತ ಧರ್ಮದಲ್ಲಿ ಅದಮ್ಯ ಜೀವನಪ್ರೀತಿಯಿಂದ ಕೂಡಿದ ದಯಾಭಾವ ಬಿಟ್ಟರೆ ಬೇರೇನೂ ಇಲ್ಲ. ಅದುವೇ ಸಕಲಜೀವಾತ್ಮರ ಕೂಡ ದೇವರ ಜೊತೆ ಒಂದಾಗಿಸುವಂಥ ಮಾರ್ಗ.

**ಲಿಂಗವಂತರು ಪಂಚಾಂಗವನ್ನು ನಂಬಬೇಕೆ?**

ಲಿಂಗವಂತ ಧರ್ಮವು ಮೂಢನಂಬಿಕೆಗೆ ವಿರುದ್ಧವಾಗಿದೆ.

"ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ,
ಏಕಾದಶಿ ವ್ಯತೀಪಾತದಿಂದ ವೆಗ್ಗಳ,

ಸೂಕ್ಷ್ಮ ಶಿವಪಥನರಿದಂಗೆ
ಹೋಮ, ನೇಮ, ಜಪ, ತಪದಿಂದ ವೆಗ್ಗಳ
ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವಂಗೆ."

ಎಂದು ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ. ಲಿಂಗಪಥವನ್ನು ಅರಿಯುವುದು ಎಲ್ಲಕ್ಕಿಂತ ಹೆಚ್ಚಿನದಾಗಿದೆ. "ವಾರ, ತಿಥಿ, ಸುಮುಹೂರ್ತವೆಂಬ ಲೌಕಿಕದ ಕರ್ಮವ ಮಾಡಿದಡೆ ನಿಮ್ಮ ಸದ್ಭಕ್ತರಿಗೆ ದೂರವಯ್ಯಾ ಕೂಡಲಚೆನ್ನಸಂಗಮದೇವಾ" ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.

**ಅಷ್ಟಾವರಣ, ಷಟ್‌ಸ್ಥಲ ಮತ್ತು ಪಂಚಾಚಾರ ಅಂದರೆ?**

ಇವು ಲಿಂಗವಂಥ ಧರ್ಮಾಚರಣೆಯ ಮೂರು ಅವಿಭಾಜ್ಯ ಅಂಗಗಳು. ಆದರೆ ಇವೆಲ್ಲ ೧೨ನೇ ಶತಮಾನದ ಮೊದಲೇ ಇದ್ದವು ಎಂದು ಪಟ್ಟಭದ್ರ ಹಿತಾಸಕ್ತಿಗಳು ಪ್ರತಿಪಾದಿಸುತ್ತಿವೆ. ಕಳೆದ ೮೦೦ ವರ್ಷಗಳ ಅವಧಿಯಲ್ಲಿ ಇಂಥ ಅನೇಕ ಅನ್ಯಾಯಗಳನ್ನು ಶರಣರ ಲಿಂಗವಂತ ಧರ್ಮದ ಮೇಲೆ ಮಾಡಲಾಗಿದೆ. ಹೀಗೆ ಹಿಂದಿನ ಗ್ರಂಥಗಳಲ್ಲಿ ಈ ವಿಚಾರಗಳನ್ನು ಪ್ರಜ್ಞಾಪೂರ್ವಕವಾಗಿ ಸೇರಿಸಿದ್ದನ್ನು ಎತ್ತಿ ತೋರಿಸುವ ಪಟ್ಟಭದ್ರ ಹಿತಾಸಕ್ತಿಗಳು 'ಬಸವಣ್ಣನವರು ಇಷ್ಟಲಿಂಗದ ಜನಕರು' ಎಂಬುದನ್ನೂ ಒಪ್ಪಿಕೊಳ್ಳುವುದಿಲ್ಲ. ಇಷ್ಟಲಿಂಗ ಕೂಡ ಮೊದಲೇ ಇತ್ತು ಎಂದು ವಾದಿಸುತ್ತಾರೆ! "ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ" ಎಂದು ಹೇಳುವ ಬಸವಣ್ಣನವರು ಇಷ್ಟಲಿಂಗದ ಮೂಲಕ ಜಾತಿವ್ಯವಸ್ಥೆಗೆ ಕೊಡಲಿ ಪೆಟ್ಟು ಕೊಟ್ಟಿದ್ದಾರೆ. ಆದರೆ ಮೇಲು ಕೀಳುಗಳಲ್ಲಿ ನಂಬಿಕೆ ಇರುವ ಲಿಂಗೋದ್ಭವವಾದಿಗಳು ಬಸವಣ್ಣನವರಿಗೆ ಇಷ್ಟಲಿಂಗ ಕೊಟ್ಟವರು ತಮ್ಮ ಆಚಾರ್ಯರೇ ಎಂದು ಸಾಧಿಸಲು ವಿಫಲ ಪ್ರಯತ್ನ ಮಾಡುತ್ತಲೇ ಇದ್ದಾರೆ.

'ಗುರು, ಲಿಂಗ, ಜಂಗಮ, ಪಾದೋದಕ (ಜ್ಞಾನೋದಕ), ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ' ಇವು ಅಷ್ಟಾವರಣಗಳು. ಐಹಿಕ ಜಗತ್ತಿನ ವಸ್ತುಮೋಹದಿಂದ ರಕ್ಷಿಸುವಂಥವು.

'ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ' ಇವು ಷಟ್‌ಸ್ಥಲಗಳು. ಲಿಂಗವಂತರ ಮಾನಸಿಕ ಮಜಲುಗಳನ್ನು ಸೂಚಿಸುತ್ತವೆ. ವ್ಯಷ್ಟಿಯಿಂದ ಸಮಷ್ಟಿಪ್ರಜ್ಞೆ ವರೆಗಿನ ವ್ಯಕ್ತಿತ್ವ ವಿಕಸನವನ್ನುಂಟು ಮಾಡುವ ಸ್ಥಲಗಳಿವು.

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ ಇವು ಪಂಚಾಚಾರಗಳು. ಇವುಗಳನ್ನು ಆಚರಣೆಯಲ್ಲಿ ತರುವುದೇ ಲಿಂಗವಂತರ ಕರ್ತವ್ಯವಾಗಿದೆ.

ಇಷ್ಟಲಿಂಗದಲ್ಲಿ ನಂಬಿಕೆ ಇಟ್ಟು ಏಕದೇವೋಪಾಸಕರಾಗುವುದು ಲಿಂಗಾಚಾರ. ಪರಹಿತ ಬಯಸುವುದು ಸದಾಚಾರ. ಜಾತಿಭೇದ ಮಾಡದಿರುವುದು

ಶಿವಾಚಾರ. ಶಿವಭಕ್ತರ ನಿಂದೆಯನ್ನು ಸಹಿಸದಿರುವುದು ಗಣಾಚಾರ. ಶಿವಭಕ್ತರಲ್ಲಿ ಸೇವಾಭಾವದಿಂದ ಇರುವುದು ಭೃತ್ಯಾಚಾರ.

**ಲಿಂಗವಂತ ಧರ್ಮದಲ್ಲಿ ಜಾತಿಗಳಿವೆಯೆ?**

ಲಿಂಗವಂತ ಧರ್ಮ ನಿರ್ಜಾತಿ ಧರ್ಮವಾಗಿದೆ. ಮನುವಾದಿಗಳ ವರ್ಣ, ಜಾತಿ ಮತ್ತು ಉಪಜಾತಿಗಳನ್ನು ನಿರ್ನಾಮ ಮಾಡುವ ಉದ್ದೇಶದಿಂದಲೇ ಈ ಧರ್ಮ ಜನ್ಮತಾಳಿದೆ. ದುರಂತವೆಂದರೆ ಈ ಧರ್ಮ ಕಾಲಾನುಕ್ರಮದಲ್ಲಿ ಜಾತಿ ಉಪಜಾತಿಗಳಿಂದ ತುಂಬಿಹೋಗಿದೆ. ಲಿಂಗಾಯತರು ಯಾವಾಗ ಹಿಂದೂ-ಲಿಂಗಾಯತರಾದರೊ ಆವಾಗಲೇ ಅವರು ತಮ್ಮ ಸ್ವತಂತ್ರ ಧರ್ಮವನ್ನು ಕಳೆದುಕೊಂಡು ಹಿಂದೂ ಧರ್ಮದೊಳಗಿನ ಲಿಂಗಾಯತ ಜಾತಿಯಾದರು. ಈ ದುರಂತ ಎಲ್ಲಿಯ ವರೆಗೆ ಮುಂದುವರಿಯಿತೆಂದರೆ ಜಾತಿಗಳಿಲ್ಲದ ಲಿಂಗಾಯತ ಧರ್ಮಕ್ಕೆ ಸಂಬಂಧಿಸಿದ ಕಾಯಕಗಳು ಉಪಜಾತಿಗಳಾಗಿ ರೂಪುಗೊಂಡವು. ಸ್ವತಂತ್ರ ಲಿಂಗವಂತ ಧರ್ಮದಲ್ಲಿ ಸಮಗಾರ ಹರಳಯ್ಯನವರು ಎಂದರೆ ಸಮಗಾರ ಕಾಯಕದ ಲಿಂಗವಂತ ಹರಳಯ್ಯನವರು. ಆದರೆ ಲಿಂಗಾಯತವು ಹಿಂದೂ ಧರ್ಮದ ಭಾಗವಾದಾಗ ಸಮಗಾರ ಎಂಬುದು ಜಾತಿಯಾಯಿತು. ಹೀಗೆ ಲಿಂಗಾಯತ ಜಾತಿಯಾದ ನಂತರ ಜಂಗಮ, ಆರಾಧ್ಯ, ಬಣಜಿಗ, ಪಂಚಮಸಾಲಿ, ಕುಡು ಒಕ್ಕಲಿಗ, ಸಾದರ, ನೊಳಂಬ, ನಗರ್ತ, ಗೌಡಲಿಂಗಾಯತ, ಲಿಂಗಾಯತ ರೆಡ್ಡಿ, ಕುರುಹಿನಶೆಟ್ಟಿ, ಗಾಣಿಗ, ಬಣಗಾರ, ನೇಕಾರ, ಶಿವಸಿಂಪಿ, ಶೀಲವಂತ, ಹೂಗಾರ ಮುಂತಾದ ಉಪಜಾತಿಗಳು ಹುಟ್ಟಿಕೊಂಡಾಗ ಕಾಯಕದ ಪ್ರಾಮುಖ್ಯ ಹೊರಟುಹೋಯಿತು.

ಮೈಸೂರು ರಾಜ್ಯದ ೧೮೯೧ನೇ ಜನಗಣತಿಯ ಪ್ರಕಾರ ಲಿಂಗಾಯತದಲ್ಲಿ ೩೮ ಉಪಜಾತಿಗಳಿವೆ. ವೀರಶೈವವನ್ನು ೩೮ನೆಯ ಉಪಜಾತಿಯಾಗಿ ಪರಿಗಣಿಸಲಾಗಿದೆ. ೧೯೦೧ರ ಬಾಂಬೆ-ಕರ್ನಾಟಕದ ಜನಗಣತಿಯ ಪ್ರಕಾರ ೪೩ ಉಪಜಾತಿಗಳಿವೆ.

ಲಿಂಗಾಯತರು ತಮ್ಮ ಸ್ವತಂತ್ರ ಧರ್ಮವನ್ನು ಮರೆತು ಉಪಜಾತಿಗಳಲ್ಲಿ ಒಡೆದು ಹೋದಾಗ ಸಹಜವಾಗಿಯೆ ಅವರ ತಲೆಯಲ್ಲಿ ಮನು ವಾಸ ಮಾಡುವನು. ಆಗ ಬಸವಣ್ಣ ನಾಲಿಗೆಯ ಮೇಲೆ ಮಾತ್ರ ಇರುತ್ತಾರೆ. ಲಿಂಗವಂತ ಧರ್ಮ ಉಳಿಯಬೇಕಾದರೆ ಲಿಂಗಾಯತರು ಜಾತಿಗಳನ್ನು ನಿರ್ನಾಮ ಮಾಡುವುದು ಅವಶ್ಯವಾಗಿದೆ. ಇಷ್ಟಲಿಂಗಪೂಜಕರು ವಿವಿಧ ಉಪಜಾತಿಗಳ ಮಧ್ಯದ ಬೇಲಿಗಳನ್ನು ಕಿತ್ತೆಸೆಯಬೇಕು. ಉಪಜಾತಿಗಳ ಮಧ್ಯೆ ಯುದ್ಧೋಪಾದಿಯಲ್ಲಿ ರಕ್ತಸಂಬಂಧ ಸಾಧಿಸುವುದರ ಮೂಲಕ ಲಿಂಗಾಯತ ಒಂದು ಸ್ವತಂತ್ರ ಧರ್ಮ ಎಂಬ ಸತ್ಯವನ್ನು ಜಗತ್ತಿಗೆ ಸಾರುತ್ತ ಯಶಸ್ಸನ್ನು ಸಾಧಿಸಿದಾಗ ಮಾತ್ರ ಬಸವಾದಿ ಶರಣರು ಸ್ಥಾಪಿಸಿದ ಲಿಂಗವಂತ ಧರ್ಮ ಉಳಿಯಲು ಸಾಧ್ಯ. ಇಲ್ಲದಿದ್ದರೆ ಜಾತೀಯತೆ ಮತ್ತು

# ಬಸವಾದ್ವೈತ

ಜನ್ಮ ಜನ್ಮಕ್ಕೆ ಹೋಗಲೀಯದೆ, ಸೋಹಂ ಎಂದೆನಿಸದೆ
ದಾಸೋಹಂ ಎಂದೆನಿಸಯ್ಯಾ ;
ಲಿಂಗಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ
ಕೂಡಲಸಂಗಮದೇವಾ.

–ಬಸವಣ್ಣನವರು

ಬಸವಾದ್ವೈತವೇ ಲಿಂಗವಂತರ ತತ್ತ್ವಜ್ಞಾನ. ನಿಸರ್ಗರಹಸ್ಯವನ್ನು ತರ್ಕಬದ್ಧವಾಗಿ ಭೇದಿಸುವ ಮೂಲಕ ಬಂದ ಅರಿವಿನ ಮೇಲೆ ನಿಂತ ಈ ತತ್ತ್ವಜ್ಞಾನ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಇದಕ್ಕೆ 'ಚೈತನ್ಯಾತ್ಮಕ ಭೌತಿಕವಾದ' ಎಂದು ಕರೆಯುವೆ. ಈ ಜಗತ್ತು ಚೈತನ್ಯಮಯವಾಗಿದೆ ಎಂಬ ಸತ್ಯವನ್ನು ಅರಿಯಬೇಕು. ಅರಿತ ನಂತರ ಕಾಯಕಜೀವಿಯಾಗಿ ಪಡೆದದ್ದನ್ನು ದಾಸೋಹಂಭಾವದ ಮೂಲಕ ವಿನಿಯೋಗಿಸುತ್ತ ಅಸಹಾಯಕ ಜೀವಿಗಳ ದುಃಖ ನಿವಾರಣೆ ಮಾಡಬೇಕು. ಶಾಂತಿ, ಕರುಣೆ, ಸಮತೆ ಮತ್ತು ಸಮಾಧಾನಗಳೊಂದಿಗೆ ಸರ್ವರೊಳಗೆ ಒಂದಾಗುತ್ತ ವಿಶ್ವಪ್ರೇಮಿಯಾಗಿ ಬದುಕಬೇಕು. ಈ ಕ್ರಮದಲ್ಲಿ ಮಾನವರು ಸಮೂಹಪ್ರಜ್ಞೆಯನ್ನು ಹೊಂದಬೇಕು ಎಂದು ಈ ತತ್ತ್ವಜ್ಞಾನ ಸೂಚಿಸುತ್ತದೆ. ಹೀಗೆ ಬದುಕುವವರನ್ನು ಶಿವಸ್ವರೂಪಿಗಳು ಎಂದು ಕರೆಯಲಾಗುತ್ತದೆ.

ಜಗತ್ತು ದ್ವೈತವಾಗಿದೆ. ಅದೇ ರೀತಿ ನಮ್ಮೊಳಗೂ ದ್ವೈತವೇ ಇದೆ. ನಮ್ಮೊಳಗೆ ದ್ವೈತ ಇದೆ ಏಕೆಂದರೆ ನಾವು ಮತ್ತು ನಮ್ಮೊಳಗಿನ ದೇವರು ಬೇರೆ ಬೇರೆ! ಷಟ್‌ಸ್ಥಲಗಳ ಪ್ರಕಾರ ನಾವು ಇಡೀ ವಿಶ್ವದ ಜೊತೆ ಕೂಡುತ್ತ ಕೂಡುತ್ತ ಕೊನೆಗೆ ಐಕ್ಯಸ್ಥಲದಲ್ಲಿ ನಮ್ಮೊಳಗಿನ ದೇವರ ಜೊತೆ ಸಂಗಮವಾಗುವ ಮೂಲಕ ಬಸವಾದ್ವೈತವನ್ನು ಸಾಧಿಸಬೇಕಾಗುವುದು. ಹೀಗೆ ಲೋಕದ ಜೊತೆ 'ಕೂಡಲ'ವಾಗಿ ನಮ್ಮೊಳಗಿನ ಚೈತನ್ಯರೂಪಿ ದೇವರ ಜೊತೆ 'ಸಂಗಮ'ವಾಗುವುದೇ ಕೂಡಲಸಂಗಮ. ಅಂದರೆ ವಸ್ತು ಮತ್ತು ಚೈತನ್ಯದ ಸಂಗಮವೇ ಕೂಡಲಸಂಗಮ. ತದನಂತರ ಷಟ್‌ಸ್ಥಲವನ್ನೂ ಮೀರಿ ಸಪ್ತಸ್ಥಲವಾದ ನಿರವಯಸ್ಥಲವನ್ನು ಹೊಂದಿ ಬಯಲಾಗಬೇಕಾಗುವುದು.

"ಮೆಲ್ಲ ಮೆಲ್ಲನೆ ಭಕ್ತನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಮಾಹೇಶ್ವರನೆನಿಸಿಕೊಂಬೆ,

ಮೆಲ್ಲಮೆಲ್ಲನೆ ಪ್ರಸಾದಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ,
ಮೆಲ್ಲ ಮೆಲ್ಲನೆ ಶರಣನೆನಿಸಿಕೊಂಬೆ,
ಮೆಲ್ಲ ಮೆಲ್ಲನೆ ಐಕ್ಯನೆನಿಸಿಕೊಂಬೆ,
ಮೆಲ್ಲ ಮೆಲ್ಲನೆ ಷಟ್‌ಸ್ಥಲವ ಮೀರಿ
ನಿರವಯಸ್ಥಲವನೆಯ್ದುವೆನಯ್ಯಾ
ಕೂಡಲಸಂಗಮದೇವಾ."

ಎಂದು ಬಸವಣ್ಣನವರು ವಿಶ್ವದಲ್ಲೇ ವಿಶಿಷ್ಟವಾದ ವ್ಯಕ್ತಿತ್ವವಿಕಸನದ ರಹಸ್ಯವನ್ನು ತಿಳಿಸಿದ್ದಾರೆ. ವ್ಯಕಿತ್ವ ವಿಕಸನವು ವೈಯಕ್ತಿಕವಾಗಿರುವುದಿಲ್ಲ. ಇನ್ನೊಬ್ಬರ ಮೇಲೆ ಪ್ರಭಾವ ಬೀರಲಿಕ್ಕಾಗಿಯೂ ಇರುವುದಿಲ್ಲ. ವ್ಯಕ್ತಿಯೊಬ್ಬ ತನ್ನ ಕ್ರಿಯೆಯ ಮೂಲಕ ಲೋಕಕಲ್ಯಾಣ ಮಾಡುತ್ತ ವ್ಯಕ್ತಿತ್ವವಿಕಸನ ಹೊಂದುವನು ಹೊರತಾಗಿ ಜ್ಞಾನ ಮತ್ತು ಸಂಪತ್ತನ್ನು ತನಗಾಗಿ ಗಳಿಸುವುದರ ಮೂಲಕ ಅಲ್ಲ. ಹೀಗೆ ಮೊದಲಿನ ಐದು ಸ್ಥಲಗಳಾದ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ ಮತ್ತು ಶರಣ ಸ್ಥಲಗಳಲ್ಲಿ ಮಾನವ ವಿಶ್ವಮಾನವನಾಗುತ್ತಾನೆ. ನಂತರ ಆರನೇ ಸ್ಥಲವಾದ ಐಕ್ಯಸ್ಥಲದಲ್ಲಿ ಹೊರಗೆ ಸ್ಥಿತಿಪ್ರಜ್ಞನಾಗಿ ಒಳಗೆ ಸ್ಥಿತಪ್ರಜ್ಞನಾಗಿ ಅಚ್ಚಲಿಂಗೈಕ್ಯದ ಅನುಭಾವ ಹೊಂದಿರುತ್ತಾನೆ. ಈ ಬದುಕಿನಲ್ಲಿ ಕ್ರಿಯಾಶೀಲವಾಗಿದ್ದುಕೊಂಡೇ 'ಮೋಕ್ಷ'ವನ್ನು ಸಾಧಿಸುವ ಕ್ರಮವಿದು. ಕೊನೆಗೆ ಸಪ್ತಸ್ಥಲದಲ್ಲಿ ಇಹಲೋಕಯಾತ್ರೆ ಮುಗಿಸಿ ಜೈವಿಕ ಪ್ರಕ್ರಿಯೆಯಂತೆ ಬಯಲಾಗುತ್ತಾನೆ. ಇದುವೆ ನಿರವಯಸ್ಥಲ.

ಹೀಗೆ ಬಸವಣ್ಣನವರು ನಿಸರ್ಗಸತ್ಯದ ಮೂಲಕ ಸಪ್ತಸ್ಥಲಗಳನ್ನು ಗುರುತಿಸಿದ್ದಾರೆ. ಮಾನವ, ಇಡೀ ವಿಶ್ವ ಮತ್ತು ದೇವರನ್ನು ಒಂದಾಗಿಸಿದ್ದಾರೆ. ದ್ವೈತದಿಂದ ಬಸವಾದ್ವೈತವನ್ನು ಸಾಧಿಸುವ ಮಾರ್ಗವಿದು. ಬಸವಾದ್ವೈತದಲ್ಲಿ ನಮ್ಮ ಮತ್ತು ನಮ್ಮೊಳಗಿನ ದೇವರ ಜೊತೆ ನೇರ ಸಂಬಂಧವಿಲ್ಲ. ನಾವು ನಮ್ಮೊಳಗಿನ ದೇವರನ್ನು ಕೂಡಬೇಕೆಂದರೆ ಏಕಾಂತದಿಂದ ಲೋಕಾಂತವನ್ನು ಸಾಧಿಸಲೇಬೇಕು. ಲೋಕವೇ ತಾನಾಗಬೇಕು. "ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ ಚೆನ್ನಮಲ್ಲಿಕಾರ್ಜುನಾ?" ಎಂದು ಅಕ್ಕಮಹಾದೇವಿ ಕೇಳುತ್ತಾಳೆ. ಅಂದರೆ ಜೀವಕಾರುಣ್ಯದಿಂದ ಬದುಕಬೇಕು ಎಂದು ಸೂಚಿಸುತ್ತಾಳೆ. ಹೀಗೆ ಜೀವಕಾರುಣ್ಯದಿಂದ ಬದುಕುವ ಮೂಲಕ ಕ್ರಿಯಾಶೀಲರಾಗಿ ಲೋಕಕ್ಕೆ ಹಿತವನ್ನುಂಟು ಮಾಡಬೇಕು. ಅಂದಾಗ ಮಾತ್ರ ನಾವು ನಮ್ಮೊಳಗಿನ ದೇವರ ಜೊತೆ ಒಂದಾಗುವ ಅರ್ಹತೆಯನ್ನು ಪಡೆಯುತ್ತೇವೆ.

ಹೊರಗಿನ ದ್ವೈತ ಮತ್ತು ಒಳಗಿನ ದ್ವೈತಗಳೆರಡೂ ಸಮಯಾಧೀನವಾಗಿವೆ. ಜಗತ್ತಿನ ಮೂಲತತ್ತ್ವವಾದ ಏಕತೆಯ ಅರಿವಾಗುವವರೆಗೆ ನಮ್ಮಲ್ಲಿ ದ್ವೈತವಿರುತ್ತದೆ. ವಿಶ್ವ ಬದುಕಿರುವವರೆಗೆ ವಿಶ್ವದಲ್ಲಿ ದ್ವೈತವಿರುತ್ತದೆ. ಅದ್ವೈತವಾದ ಅವಿನಾಶ ಚೈತನ್ಯವೇ

ಎಲ್ಲದರ ಮೂಲ ಆಗಿರುವುದರಿಂದ ಕೊನೆಯಲ್ಲಿ ಎಲ್ಲವೂ ಬಯಲಾಗಿ ಚೈತನ್ಯಮಯವೇ ಆಗುವುದು. ಈ ಸತ್ಯವನ್ನು ತಿಳಿಸುವಂಥದ್ದೇ ಬಸವಾದ್ವೈತ.

"ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ" ಎಂದು ಬಸವಣ್ಣನವರು ತಿಳಿಸಿದ್ದಾರೆ. ಅವರು 'ನಾನೇ ದೇವರು' ಎಂಬುದನ್ನು ನಿರಾಕರಿಸುತ್ತಾರೆ. 'ನನ್ನೊಳಗೆ ದೇವರಿದ್ದಾನೆ' ಎನ್ನುತ್ತಾರೆ. ನಾವು ನಮ್ಮೊಳಗಿನ ದೇವರ ದಾಸರಾದಾಗ, ಆ ದೇವರೊಡನೆ ಒಂದಾಗುವ ಪ್ರಕ್ರಿಯೆ ಆರಂಭವಾಗುತ್ತದೆ. ಹೀಗೆ ನಮ್ಮೊಳಗೇ ಇರುವ ಸೃಷ್ಟಿಕರ್ತನ ಜೊತೆ ಒಂದಾಗುವ ಮೊದಲು, ಆತನ ಸೃಷ್ಟಿಯ ಭಾಗವಾಗಿರುವ ನಾವು ಇಡೀ ಸೃಷ್ಟಿಯ ಜೊತೆ ಒಂದಾಗಿರಬೇಕಾಗುತ್ತದೆ. ಸಕಲಜೀವಾತ್ಮರ ಜೊತೆ ಆತ್ಮಿಕವಾಗಿ ಒಂದಾಗುತ್ತ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಸ್ಥಲಗಳನ್ನು ದಾಟುವುದರೊಳಗೆ ಸಕಲಜೀವಾತ್ಮರಿಗೆ ಲೇಸನೇ ಬಯಸುತ್ತ ಏಕಾತ್ಮದಿಂದ ವಿಕಸನಗೊಂಡು ಲೋಕಾತ್ಮದ ಜೊತೆ ಅದ್ವೈತವನ್ನು ಸಾಧಿಸಿರುತ್ತೇವೆ. ಕೊನೆಗೆ ಐಕ್ಯಸ್ಥಲವನ್ನು ತಲುಪಿದಾಗ ನಮ್ಮೊಳಗಿನ ಪರಮಾತ್ಮನೊಡನೆ ಅದ್ವೈತವನ್ನು ಸಾಧಿಸಿ ಅಚ್ಚಲಿಂಗೈಕ್ಯರಾಗುತ್ತೇವೆ. ಈ ತೆರನಾಗಿ ಅಚ್ಚಲಿಂಗೈಕ್ಯನಾದಾಗ ಏಕಾತ್ಮ, ಲೋಕಾತ್ಮ ಮತ್ತು ಪರಮಾತ್ಮವೆಲ್ಲ ಒಂದಾಗಿ ಬಸವಾದ್ವೈತವಾಗುತ್ತದೆ. ಹೀಗೆ ವ್ಯಷ್ಟಿಮಯ ಏಕಾತ್ಮವು ಸಮಷ್ಟಿಮಯ ಲೋಕಾತ್ಮವಾಗಿ ರೂಪುಗೊಂಡು ಪರಮಾತ್ಮನೊಡನೆ ಐಕ್ಯವನ್ನು ಸಾಧಿಸುತ್ತದೆ.

> "ಅನಾದಿಯ ಮಗನು ಆದಿ, ಆದಿಯ ಮಗನತೀತ,
> ಅತೀತನ ಮಗನು ಆಕಾಶ, ಆಕಾಶನ ಮಗನು ವಾಯು,
> ವಾಯುವಿನ ಮಗನಗ್ನಿ, ಅಗ್ನಿಯ ಮಗನು ಅಪ್ಪು,
> ಅಪ್ಪುವಿನ ಮಗನು ಪೃಥ್ವಿ,
> ಪೃಥ್ವಿಯಿಂದ ಸಕಲ ಜೀವರೆಲ್ಲರು ಉದ್ಭವಿಸಿದರು ಗುಹೇಶ್ವರ."

ಎಂದು ಅಲ್ಲಮಪ್ರಭುದೇವರು ತಿಳಿಸಿದ್ದಾರೆ. ಸಕಲಜೀವಾತ್ಮರ ಹಾಗೆ ನಾವೆಲ್ಲ ಪೃಥ್ವಿಯಿಂದಲೇ ಜನಿಸಿದ್ದೇವೆ. ನಮ್ಮ ಜಾತಿ, ಕುಲ ಮುಂತಾದ ಭೇದಭಾವಗಳು ಕೃತ್ರಿಮವಾಗಿವೆ.

> "ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ
> ರೂಪು ನಿರೂಪನೊಡಗೂಡುವ ಪರಿಯಂತು ಹೇಳಾ
> ಅಸಂಬಂಧ ಸಂಬಂಧವಾಗಿ ಇದೆ.
> ದೇಹ ಇಂದ್ರಿಯವೆಂಬ ಜಾತಿಸೂತಕವಿರಲು
> ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವಾ."

ಎಂದು ಅಲ್ಲಮಪ್ರಭುಗಳು ಅನಂತವಾದುದರ ಕಡೆಗೆ ಗಮನ ಸೆಳೆದಿದ್ದಾರೆ. ಕಣ್ಣಿಗೆ ಕಾಣುವಂಥದ್ದು, ಅಂದರೆ ಹುಟ್ಟಿರುವಂಥದ್ದು ಸಾಯಲೇಬೇಕು. ಬಯಲಿನಿಂದ ಸೃಷ್ಟಿಯಾದ ಪೃಥ್ವಿಯಿಂದಲೇ ಎಲ್ಲವೂ ಮೂಡಿಬಂದಿವೆ. ನಾವೆಲ್ಲ ಮತ್ತೆ ಕೊನೆಗೊಂದು

ದಿನ ಪೃಥ್ವಿಯ ಭಾಗವಾಗಿ ಹೋಗುತ್ತೇವೆ. ಒಂದು ದಿನ ಈ ಪೃಥ್ವಿ ಕೂಡ ಬಯಲಾಗುತ್ತದೆ. ಕೊನೆಗೊಂದು ದಿನ ಸೂರ್ಯ, ಚಂದ್ರರ ಸಮೇತ ಸಕಲ ನಕ್ಷತ್ರ, ಗ್ರಹ ಮತ್ತು ಉಪಗ್ರಹಗಳ ಸಮೇತ ಎಲ್ಲವೂ ಬಯಲಿನಲ್ಲಿ ಲೀನವಾಗುತ್ತವೆ. ಆ ಬಯಲೇ ಚೈತನ್ಯ.

ಈ ಪ್ರಕಾರ ಚೈತನ್ಯದಿಂದಾದ ಪ್ರತಿ ವಸ್ತುವಿಗೆ ಅಳಿವಿದೆ. ಆದರೆ ಅದರೊಳಗಿನ ಚೈತನ್ಯಕ್ಕೆ ಅಳಿವಿಲ್ಲ. ಪ್ರತಿವಸ್ತುವಿನ ಒಳಗಿನ ಚೈತನ್ಯವು ಕಾಯಕನಿರತ (ಕ್ರಿಯಾಶೀಲ)ವಾಗಿದೆ. ವಸ್ತು ತನ್ನ ಅಸ್ತಿತ್ವವನ್ನು ಕಳೆದುಕೊಂಡಾಗ ಮತ್ತೆ ಚೈತನ್ಯವಾಗಿ ಬಯಲಾಗುತ್ತದೆ.

"ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂದು ಬಸವಣ್ಣನವರು ಹೇಳುತ್ತಾರೆ. ಇಲ್ಲಿ ಸ್ಥಾವರ ಎಂದರೆ ವಸ್ತು. ಜಂಗಮ ಎಂದರೆ ಅದರೊಳಗಿನ ಚೈತನ್ಯ. "ಸ್ಥಾವರ ಜಂಗಮ ಒಂದೇ" ಎಂದು ಬಸವಣ್ಣನವರು ಇನ್ನೊಂದು ವಚನದಲ್ಲಿ ಹೇಳುತ್ತಾರೆ. ಸ್ಥಾವರ ಎನ್ನಿಸಿಕೊಳ್ಳುವ ವಸ್ತು ಕೂಡ ಚೈತನ್ಯ ಎಂಬ ಜಂಗಮದಿಂದಲೇ ಆಗಿದೆ ಎಂಬುದು ಇದರರ್ಥ. (ಜಂಗಮಕ್ಕೆ ಅನೇಕ ಅರ್ಥಗಳಿವೆ. ಚೈತನ್ಯ ಎಂಬುದು ಅವುಗಳಲ್ಲೊಂದು) ಹೀಗೆ ಚೈತನ್ಯವು ವಸ್ತುವಿನ ರೂಪ ತಾಳುತ್ತದೆ. ಆದರೆ ಅದರೊಳಗೆ ಚೈತನ್ಯವಾಗೇ ಉಳಿದುಕೊಳ್ಳುತ್ತದೆ. ಕಾಲದ ಕಟ್ಟಳೆಯ ಪ್ರಕಾರ ತನ್ನ ಆಯುಷ್ಯ ಮುಗಿದನಂತರ ವಸ್ತುವೊಂದು ಅಳಿದ ನಂತರ ಮತ್ತೆ ಚೈತನ್ಯವಾಗಿ ಮಾರ್ಪಡುತ್ತದೆ. ವಸ್ತುಜಗತ್ತು ಚೈತನ್ಯದೊಳಗೆ ಸೇರಿಕೊಳ್ಳುತ್ತ ಕೊನೆಗೆ ಬಯಲಾಗುವುದೇ ಕಾಸ್ಮಿಕ್ ಡ್ರಾಮಾ (ಲೀಲೆ). ಈ ವಸ್ತು ಮತ್ತು ಚೈತನ್ಯದ ಕಾರಣಪುರುಷನೇ ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣ ಕೂಡಲಸಂಗಮದೇವ.

ಲಿಂಗಾಯತ ಧರ್ಮವನ್ನು ಶೂನ್ಯಧರ್ಮ ಅಥವಾ ಬಯಲಧರ್ಮ ಎಂದೂ ಕರೆಯಬಹುದು. ವೈಜ್ಞಾನಿಕ ಮನೋಭಾವದ ಸಮಾಜ ನಿರ್ಮಾಣದಲ್ಲಿ ಈ ಧರ್ಮ ಪ್ರಮುಖ ಪಾತ್ರ ವಹಿಸುತ್ತದೆ.

'ಲಿಂಗಾಂಗಸಾಮರಸ್ಯ'ದಲ್ಲಿ ಲಿಂಗವೆಂದರೆ ಚೈತನ್ಯ. ಅಂಗವೆಂದರೆ ವ್ಯಷ್ಟಿಯಿಂದ ಸಮಷ್ಟಿವರೆಗಿನ ವಸ್ತು. ವಸ್ತುರೂಪದಲ್ಲಿರುವ ನಾವು ಜಗತ್ತೆಂಬ ವಸ್ತುವಿನೊಂದಿಗೆ ತತ್ತ್ವಬದ್ಧವಾಗಿ ಮತ್ತು ಭಾವಪೂರ್ಣವಾಗಿ ಒಂದಾದಾಗ 'ಅಂಗ' ಆಗುತ್ತೇವೆ. 'ಲಿಂಗಾಂಗಸಾಮರಸ್ಯ'ವೆಂದರೆ ನಾವು ಸಕಲಜೀವಾತ್ಮರೆಂಬ ಜಗತ್ತನ್ನು ಒಳಗೊಂಡು ನಮ್ಮೊಳಗಿನ ಚೈತನ್ಯದ ಜೊತೆ ಒಂದಾಗುವುದು. ನಾವೇ ಅಂಗವೆಂದು ಭಾವಿಸುತ್ತ ನಮ್ಮೊಳಗಿನ ಚೈತನ್ಯರೂಪಿ ಲಿಂಗದ ಜೊತೆ ಒಂದಾಗುವುದು ಬಸವಾದ್ವೈತವಾಗಲಾರದು. ನಾವು ಸಕಲಜೀವಾತ್ಮರನ್ನು ನಮ್ಮೊಳಗೆ ಇಟ್ಟುಕೊಂಡಾಗ ಮಾತ್ರ ಲಿಂಗದ ಜೊತೆ ಸಾಮರಸ್ಯ ಸಾಧಿಸಲು ಸಾಧ್ಯ. ಇದುವೆ ಬಸವಾದ್ವೈತದ ವೈಶಿಷ್ಟ್ಯ.

ಸಕಲಜೀವಾತ್ಮರ ಸಂಬಂಧ ಬಂದಾಗ ಜಾತಿ, ವರ್ಣ, ವರ್ಗ ಮತ್ತು ಲಿಂಗಭೇದಗಳಷ್ಟೇ ಅಲ್ಲ ಜೀವಭೇದಗಳೂ ಹೊರಟು ಹೋಗುತ್ತವೆ. ಪ್ರಾಣಿ, ಪಕ್ಷಿ, ಕ್ರಿಮಿ, ಕೀಟ ಮತ್ತು ಜಲಚರಗಳು ಮೊದಲು ಮಾಡಿ ಈ ಪೃಥ್ವಿಯಲ್ಲಿ ಜನಿಸಿದ ಮರಗಿಡಗಳು ಕೂಡ ನಮ್ಮ ಕುಟುಂಬಕ್ಕೇ ಸೇರಿದವುಗಳಾಗುತ್ತವೆ. "ವಸುಧೈವ ಕುಟುಂಬಕಂ" (ಇಡೀ ಪೃಥ್ವಿ ಒಂದು ಕುಟುಂಬ) ಎಂದು ಮಾತನಾಡುತ್ತ ಸರ್ವಭೇದಗಳನ್ನು ಪಾಲಿಸುವವರಿಗೆ ಬಸವಾದ್ವೈತ ದೊಡ್ಡ ಸವಾಲಾಗಿದೆ. ಏಕೆಂದರೆ ಬಸವಾದ್ವೈತ ಎಂಬುದು 'ಇಡೀ ಪೃಥ್ವಿಯಲ್ಲಿನ ಜೀವಿಗಳೆಲ್ಲ ಒಂದೇ ಕುಟುಂಬ' ಎಂದು ಕ್ರಿಯಾಶೀಲವಾಗಿ ಹೇಳುವ ತತ್ತ್ವ ಎಂಬುದನ್ನು ೧೨ನೇ ಶತಮಾನದ ಶರಣಸಂಕುಲ ಸಾಧಿಸಿ ತೋರಿಸಿದೆ. ಶರಣಸಂಕುಲದಲ್ಲಿ ಯಾವುದೇ ತೆರನಾದ ಭೇದಭಾವ ಇರಲಿಲ್ಲ.

**ಧರ್ಮಸಂದೇಶ:** 'ಒಬ್ಬನೇ ದೇವರು, ಒಂದೇ ವಿಶ್ವ, ಒಂದೇ ಮಾನವ ಕುಲ. ಸಕಲಜೀವಾತ್ಮರ ಲೇಸನ್ನೇ ಬಯಸುತ್ತ ಸಮಾನತೆಗಾಗಿ ಕ್ರಿಯಾಶೀಲರಾಗುವುದು ಮಾನವರ ಕರ್ತವ್ಯ' ಎಂಬುದು ಲಿಂಗವಂತ ಧರ್ಮದ ಸಂದೇಶವಾಗಿದೆ. ಕಾಯಕವು 'ಧಾರ್ಮಿಕ ಕರ್ತವ್ಯ' ಎಂಬಷ್ಟು ಪ್ರಮುಖವಾಗಿದೆ. ಇಲ್ಲಿ ಎಲ್ಲದಕ್ಕೂ ಮೂಲವಾದ ಕಾಯಕದಲ್ಲಿ ನಿರತರಾಗುವ ಮಾನವರಿಗೆ ಇಡೀ ಪ್ರಕೃತಿ ಮತ್ತು ಸಕಲಜೀವರಾಶಿಯ ಜೊತೆ ಒಂದಾಗುವ ದಾರಿ ಕಾಣತೊಡಗುವುದು. ಸೃಷ್ಟಿಕರ್ತನ ಸೃಷ್ಟಿಯಲ್ಲಿ ಇರುವವರೆಲ್ಲರೂ ಸಮಾನರು ಎಂಬ ಭಾವ ಮೂಡುವುದು. ದುಡಿದು ಪಡೆದದ್ದನ್ನು ದೇವರ ಪ್ರಸಾದವೆಂದು ಭಾವಿಸಿ ಎಲ್ಲರೊಡನೆ ಹಂಚಿಕೊಂಡು ತಿನ್ನುವ ಜೀವಕಾರುಣ್ಯದ ಧರ್ಮವಿದು.

**ಚೈತನ್ಯವೇ ಬಸವಣ್ಣನವರ ದೇವರು :** ಬಸವಣ್ಣನವರ ದೇವರು ವಿಶ್ವದಲ್ಲೇ ವಿಶಿಷ್ಟವಾದ ದೇವರು. ಆ ದೇವರು ಮಠದಲ್ಲಿ, ಮಂದಿರದಲ್ಲಿ, ಮೂರ್ತಿಯಲ್ಲಿ ಅಥವಾ ಕೈಲಾಸದಲ್ಲಿ ಇಲ್ಲ. ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣನಾದ ದೇವರು ಚೈತನ್ಯಸ್ವರೂಪಿ. ಅಂಗವೇ ಆ ಚೈತನ್ಯವೆಂಬ ದೇವರ ದೇವಸ್ಥಾನವಾಗಿದೆ.

ಲಿಂಗಾಯತ ಧರ್ಮದಲ್ಲಿ ಅಂಗದೊಳಗಿನ ಚೈತನ್ಯದ ಹೆಸರೇ ಲಿಂಗದೇವ. ಆ ಲಿಂಗದೇವ ಎಂಬುದೇ ಅರಿವು. ಲಿಂಗನದೇವನ ಕುರುಹು ಇಷ್ಟಲಿಂಗ. ಲಿಂಗವಂತರು ಮನಸ್ಸನ್ನು ಶೂನ್ಯ ಮಾಡಿಕೊಂಡು ತಮ್ಮೊಳಗಿನ ದೇವರ ಜೊತೆ ಕೂಡಲು ಇರುವ ಸಾಧನವೇ ಈ ಇಷ್ಟಲಿಂಗ.

"ಅರಿವು ಹಿಡಿಯಂದಡೆ ಕುರುಹು ಹಿಡಿದರು ನೋಡಾ" ಎಂದು ಶೂನ್ಯಸಿಂಹಾಸನಾಧೀಶ್ವರ ಅಲ್ಲಮಪ್ರಭುದೇವರು ತಿಳಿಸಿದ್ದಾರೆ. ಲಿಂಗವಂತ ಧರ್ಮದಲ್ಲಿ ಅರಿವೇ ಗುರು, ಆ ಗುರುವೇ ದೇವರು. ನಂತರದವರು ದೀಕ್ಷಾಗುರುಗಳು ಮತ್ತು ಶಿಕ್ಷಾಗುರುಗಳು. ಲಿಂಗಾಯತದ ರೀತಿ ನೀತಿಗಳನ್ನು ತಿಳಿಸುತ್ತ ಧರ್ಮಪ್ರಚಾರ ಮಾಡುವವರು ತತ್ತ್ವಜಂಗಮರು.

ತಮ್ಮೊಳಗಿನ ದೇವರಿಗೆ ಶರಣಾಗತರಾದವರು ಹೊರಗಡೆ ಎಲ್ಲಿಯೂ ಶರಣಾಗತರಾಗಬೇಕಿಲ್ಲ. ಆದರೆ ಸರ್ವರೂ ಶಿವಸ್ವರೂಪಿಗಳಾಗಿರುವುದರಿಂದ ಬಾಗಿದ ಶಿರ ಮತ್ತು ಮುಗಿದ ಕೈಗಳೊಂದಿಗೆ "ಶರಣು ಶರಣಾರ್ಥಿ" ಎನ್ನಬೇಕು. ಪ್ರತಿಯೊಬ್ಬರೂ ಶಿವಸ್ವರೂಪಿ ಆಗಿರುವುದರಿಂದ ಈ ಧರ್ಮದಲ್ಲಿ ಯಾರೂ ದೊಡ್ಡವರಲ್ಲ. ಸ್ವತಃ ಬಸವಣ್ಣನವರೇ "ಎನಗಿಂತ ಕಿರಿಯರಿಲ್ಲ" ಎಂದು ಹೇಳಿದ್ದಾರೆ. ಅಹಂ ಉಳ್ಳವರೇ ಕಿರಿಯರು ಎಂಬ ಅರ್ಥವನ್ನೂ ಇದು ಧ್ವನಿಸುತ್ತದೆ. ಶಿವಶರಣರಿಗಿಂತ ಹಿರಿಯರಿಲ್ಲ; ಏಕೆಂದರೆ ಅವರು ನಿರಹಂಕಾರಿಗಳು. ಅಹಂಕಾರದಿಂದ ಮುಕ್ತರಾದವರು ಮಾತ್ರ ಲಿಂಗಾಂಗಸಾಮರಸ್ಯವನ್ನು ಹೊಂದಬಲ್ಲರು.

ಲಿಂಗವಂತ ಧರ್ಮದ ಗುರಿ ಲಿಂಗಾಂಗಸಾಮರಸ್ಯವೇ ಆಗಿದೆ. ಮಾನವರು ಅಂಗ, ಮಾನವರೊಳಗಿನ ಚೈತನ್ಯವೇ ಲಿಂಗ. ಲಿಂಗವಿರುವವರೆಗೆ ಅಂದರೆ ಚೈತನ್ಯವಿರುವವರೆಗೆ ಅಂಗವಿರುವುದು. ಅಂದರೆ ನಾವು ಇರುವೆವು. ಚೈತನ್ಯ ದೂರವಾದಕೂಡಲೆ ನಾವು ಇರುವುದಿಲ್ಲ. ನಮ್ಮೊಳಗಿನ ಚೈತನ್ಯವು ಮೂಲ ಚೈತನ್ಯದ ಜೊತೆ ಒಂದಾಗಿಬಿಡುವುದು. ಹೀಗೆ ನಾವು ನಿಧನರಾದ ನಂತರ ಪರಮಾತ್ಮನ ಜೊತೆ ಒಂದಾಗುವ ಮೊದಲೇ; ಅಂದರೆ ಜೀವಂತವಿದ್ದಾಗಲೇ ನಮ್ಮೊಳಗಿನ ದೇವರ ಜೊತೆ ಒಂದಾಗುವುದೇ ಲಿಂಗಾಂಗಸಾಮರಸ್ಯ!

ಈ ಲಿಂಗಾಂಗಸಾಮರಸ್ಯ ಸರಳವಾದುದಲ್ಲ. ನಾವು ನಮ್ಮೊಳಗಿನ ದೇವರ ಜೊತೆ ಒಂದಾಗಬೇಕಾದರೆ; ಆತನ ಸೃಷ್ಟಿಯ ಜೊತೆ ಒಂದಾಗಿ ಸಕಲಜೀವಾತ್ಮರಿಗೆ ಲೇಸನೆ ಬಯಸುವ ವಿಶ್ವಮಾನವರಾಗಬೇಕು. ಜಾತಿ, ಕುಲ, ವರ್ಣ, ವರ್ಗ ಮತ್ತು ಲಿಂಗಭೇದಗಳಿಂದ ಮುಕ್ತರಾಗಬೇಕು. ಒಳಗಿರುವ ದೇವರಿಗೆ ದಾಸೋಹಂ ಭಾವದೊಂದಿಗೆ ಶರಣಾಗತರಾಗಬೇಕು. ಹೊರಗೆ ದಾಸೋಹ ಭಾವದೊಂದಿಗೆ ಲೋಕಸೇವೆ ಮಾಡುತ್ತ ಕಾಯಕನಿಷ್ಠರಾಗಿ ಬದುಕಬೇಕು. ಅಂದಾಗ ಮಾತ್ರ ನಾವು ನಮ್ಮೊಳಗಿನ ದೇವರ ಜೊತೆ ಲಿಂಗಾಂಗಸಾಮರಸ್ಯ ಸಾಧಿಸಲು ಸಾಧ್ಯವಾಗುವುದು. ಹೀಗೆ ಶರಣರು ಅಚ್ಚಲಿಂಗೈಕ್ಯರಾಗಿ ಜೀವಿತಾವಧಿಯಲ್ಲೇ ನಿತ್ಯಮುಕ್ತಿಯನ್ನು ಹೊಂದಿದವರಾಗಿದ್ದರು.

ಬಸವಧರ್ಮದಲ್ಲಿ ಸ್ವರ್ಗವಿಲ್ಲ, ನರಕವಿಲ್ಲ, ಪುಣ್ಯವಿಲ್ಲ, ಪಾಪವಿಲ್ಲ, ಸಾವಿನ ನಂತರದ ಮುಕ್ತಿ ಇಲ್ಲ, ಪುನರ್ ಜನ್ಮವಿಲ್ಲ, ಸಂಚಿತ, ಪ್ರಾರಬ್ಧ ಮತ್ತು ಆಗಾಮಿ ಕರ್ಮಗಳಿಲ್ಲ.

ಶರಣರು ಕರ್ಮಸಿದ್ಧಾಂತವನ್ನು ತಿರಸ್ಕರಿಸಿದ್ದಾರೆ. ಮಾನವರನ್ನು ವಿಶ್ವಮಾನವರನ್ನಾಗಿಸುವ ದಯೆ ಮಾತ್ರ ಈ ಧರ್ಮದಲ್ಲಿದೆ. ಈ ಧರ್ಮಕ್ಕೆ ದಯವೇ ಮೂಲವಾಗಿದೆ.



# ಲಿಂಗಾಯತ ಸ್ವತಂತ್ರ ಧರ್ಮ

ಭಾರತದ ಮೊದಲ ಏಕದೇವೋಪಾಸನೆಯ ಧರ್ಮವಾದ ಲಿಂಗಾಯತ ಧರ್ಮವು 12ನೇ ಶತಮಾನದಲ್ಲಿ ಬಸವಣ್ಣನವರಿಂದ ಸ್ಥಾಪನೆಯಾಯಿತು. ಈ ಧರ್ಮಕ್ಕೆ ಸಮಾಜದ ಎಲ್ಲ ಸ್ಥರಗಳಿಂದ ಬಂದ 770 ನಾಯಕರಿದ್ದರು. ಬಸವಣ್ಣನವರು ಅವರನ್ನು ಅಮರಗಣಂಗಳೆಂದು ಕರೆದರು. ಈ ಧರ್ಮವು ಅವೈದಿಕ ಧರ್ಮವಾಗಿದೆ. ಲಿಂಗಾಯತವನ್ನು ಸಿದ್ಧರಾಮೇಶ್ವರರು 'ಬಸವಣ್ಣನ ಧರ್ಮ' ಎಂದು ಕರೆದಿದ್ದಾರೆ. ಶಿವನು ಭರತಖಂಡದ ಮೂಲ ದೇವರಾಗಿರುವುರಿಂದ ಆತ ಅವೈದಿಕ ದೇವರಾಗಿದ್ದಾನೆ. ವೇದಗಳಲ್ಲಿ ಶಿವ ಹೆಸರಿನ ದೇವರೇ ಇಲ್ಲ. ಲಿಂಗಾಯತ ಧರ್ಮದಲ್ಲಿ ಇಷ್ಟಲಿಂಗವು ಶಿವನ ಕುರುಹು ಆಗಿದೆ. ಲಿಂಗಾಯತ ಧರ್ಮದಲ್ಲಿನ ಶಿವನಿಗೆ ಹೆಂಡಿರು ಮಕ್ಕಳಿಲ್ಲ. ಲಿಂಗಾಯತರ ಶಿವ ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣನಾಗಿದ್ದಾನೆ. "ವೇದಕ್ಕೆ ಒರೆಯ ಕಟ್ಟುವೆ ... ... ಆಗಮದ ಮೂಗ ಕೊಯುವೆ" ಎಂದು ಬಸವಣ್ಣನವರು ತಿಳಿಸಿದ್ದಾರೆ.

ಲಿಂಗಾಯತರು ವೈದಿಕರ ವೇದವನ್ನು ನಂಬುವುದಿಲ್ಲ. ಭಗವದ್ಗೀತೆಯನ್ನೂ ನಂಬುವುದಿಲ್ಲ. ಭಗವದ್ಗೀತೆಯ ಪ್ರತಿಪಾದಕರನ್ನು ಬಸವಣ್ಣನವರು 'ಮಾಯಾಭ್ರಾಂತಿ ಕವಿದ ಗೀತಜ್ಞರು' ಎಂದು ಕರೆದಿದ್ದಾರೆ. ಲಿಂಗಾಯತರು 28 ಆಗಮಗಳನ್ನು ನಂಬುವುದಿಲ್ಲ. ವೀರಶೈವ ಧರ್ಮಗ್ರಂಥ ಸಿದ್ಧಾಂತಶಿಖಾಮಣಿಯನ್ನು ನಂಬುವ ಪ್ರಶ್ನೆಯೆ ಇಲ್ಲ. ಏಕೆಂದರೆ ಅದು 15ನೇ ಶತಮಾನದ ಗ್ರಂಥ.

33 ಕೋಟಿ ದೇವತೆಗಳನ್ನು ಒಳಗೊಂಡ ಬಹುದೇವೋಪಾಸನೆಯ ವೈದಿಕ ಧರ್ಮ ಲಿಂಗಭೇದ, ಜಾತಿಭೇದ ಮತ್ತು ಅಸ್ಪೃಶ್ಯತೆಯ ಮೇಲೆ ನಿಂತಿದೆ. ವೀರಶೈವವು ಆಚಾರ್ಯರು ಮತ್ತು ಭಕ್ತ ವರ್ಗಗಳ ಮೇಲೆ ನಿಂತಿದೆ. ಲಿಂಗಾಯತ ಧರ್ಮದಲ್ಲಿ ಎಲ್ಲರೂ ಸಮಾನರಾಗಿದ್ದಾರೆ. ವೀರಶೈವರಿಗೆ ಆಚಾರ್ಯರೇ ಗುರುಗಳು ಮತ್ತು ಸ್ವಾಮಿಗಳು. ಲಿಂಗಾಯತವು 'ಅರಿವೆ ಗುರು' ಮತ್ತು 'ಶಾಶ್ವತನಾದ ದೇವರೇ ಸ್ವಾಮಿ' ಎಂಬುದನ್ನು ನಂಬಿದೆ.

ವೇದೋಕ್ತ ವೈದಿಕ ಧರ್ಮವಾದರೆ ಆಗಮೋಕ್ತ ವೀರಶೈವವಾಗಿದೆ. ಆದರೆ ಲಿಂಗಾಯತವು ವಚನೋಕ್ತವಾಗಿದೆ. ಹೀಗಾಗಿ ಲಿಂಗಾಯತ ಧರ್ಮವು ಸದಾ ಸಂಕಷ್ಟಗಳಿಗೆ ಸಿಲುಕಿದ ಧರ್ಮವಾಗಿದೆ.

'ಲಿಂಗಾಯತ ಧರ್ಮವು, ಅನಂತವಾದ ಹಿಂದೂ ಧರ್ಮಸಾಗರದ ಮಧ್ಯೆ ನಡುಗಡ್ಡೆಯ ಹಾಗೆ ಇದೆ. ಸಾಗರದ ತೆರೆಗಳು ಅದರ ಗಟ್ಟಿಯಾದ ಅಡಿಪಾಯವನ್ನು ಸಡಿಲಿಸುವ ಹಾಗೆ ಕಾಣುತ್ತದೆ.' ( "If Lingayatism was an island thrown up within the boundless sea of Hinduism, it would appear that the waters of the ocean are doing their utmost to undermine its solid foundations.") ಎಂದು ಎಡ್ಗರ್ ಥರ್ಸ್ಟನ್ ಅವರು 1909ರಲ್ಲಿ ಪ್ರಕಟವಾದ ತಮ್ಮ ಕಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಇಂಡಿಯಾದ 4ನೇ ಸಂಪುಟದಲ್ಲಿ ತಿಳಿಸಿದ್ದಾರೆ. ಪರಿಸ್ಥಿತಿ ಹೀಗೇ ಮುಂದುವರಿದರೆ ಅವರು ನುಡಿದ ಭವಿಷ್ಯ ನಿಜವಾಗುವುದರಲ್ಲಿ ಸಂದೇಹವಿಲ್ಲ. ಲಿಂಗಾಯತ ಧರ್ಮವನ್ನು ಸ್ವತಂತ್ರ ಧರ್ಮವನ್ನಾಗಿಸುವುದರ ಮೂಲಕ ಮಾತ್ರ ಈ ಅನಾಹುತವನ್ನು ತಪ್ಪಿಸಲಿಕ್ಕೆ ಸಾಧ್ಯವಿದೆ. ಬ್ರಿಟಿಷ್ ಆಡಳಿತದಲ್ಲಿ ನಡೆದ ಜನಗಣತಿಗಳಲ್ಲಿ ಲಿಂಗಾಯತ ಪದವನ್ನೇ ಬಳಸಲಾಗಿದೆ ಎಂಬುದು ಗಮನಾರ್ಹವಾಗಿದೆ.

ಲಿಂಗಾಯತರು ವೇದ ಪ್ರಾಮಾಣ್ಯವನ್ನು ಒಪ್ಪುವುದಿಲ್ಲ ಎಂಬ ಕಾರಣದಿಂದಲೇ 12ನೇ ಶತಮಾನದಲ್ಲಿ, ಲಿಂಗವಂತರಾದ ಸಮಗಾರ ಹರಳಯ್ಯನವರ ಮಗ ಮತ್ತು ಬ್ರಾಹ್ಮಣ ಮೂಲದ ಲಿಂಗವಂತ ಮಧುವರಸರ ಮಗಳ ಮದುವೆಯನ್ನು ವಿರೋಧಿಸುವ ನೆಪದಲ್ಲಿ ವೈದಿಕರು ಬಿಜ್ಜಳ ರಾಜನ ಮೇಲೆ ಒತ್ತಡ ತಂದರು. ಇಂಥ ವಿಲೋಮ ವಿವಾಹಗಳು ವೈದಿಕಧರ್ಮಕ್ಕೆ ವಿರುದ್ಧ ಎಂದು ಸಾರಿದರು. ವೈದಿಕರ ಶಾಸ್ತ್ರಗಳು ಹೇಳಿದಂತೆ ಬಿಜ್ಜಳನ ಶಸ್ತ್ರಗಳು ಕೇಳಿದವು. ಅನೇಕ ಶರಣರ ಕೊಲೆಗಳಾದವು. ಲಕ್ಷಾಂತರ ಶರಣರು ಎಲ್ಲವನ್ನೂ ಕಳೆದುಕೊಂಡು ದಿಕ್ಕಾಪಾಲಾಗಿ ಹೋದರು. ಒಂದಿಷ್ಟು ಶರಣರು ಅಳಿದುಳಿದ ವಚನಗಳ ರಕ್ಷಣೆಗಾಗಿ ಉಳವಿಯ ಕಡೆಗೆ ಧಾವಿಸಿದರು.

ಇದಾದ ನಂತರ ಲಿಂಗಾಯತವನ್ನು ವೀರಶೈವವಾಗಿ ಪರಿವರ್ತಿಸಿ ವೈದಿಕ ಧರ್ಮದ ಒಂದು ಭಾಗ ಮಾಡುವುದಕ್ಕಾಗಿ 15ನೇ ಶತಮಾನದಿಂದ ನಿರಂತರ ಪ್ರಯತ್ನಗಳು ಪ್ರಾರಂಭವಾಗಿದ್ದು ಇಂದಿಗೂ ಮುಂದುವರಿದಿವೆ. ಪಟ್ಟಭದ್ರರು ಅನೇಕ ಪ್ರಕ್ಷಿಪ್ತ ವಚನಗಳನ್ನು ಸೇರಿಸಿದ್ದಾರೆ. ಅನೇಕ ವಚನಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿದ್ದಿದ್ದಾರೆ. ಅನೇಕ ಕಡೆ ಲಿಂಗಾಯತ ಇದ್ದಲ್ಲಿ ಅದನ್ನು ತೆಗೆದು ವೀರಶೈವ ಮಾಡಿದ್ದಾರೆ.

ಬ್ರಿಟಿಷ್ ಆಡಳಿತದಲ್ಲಿ, 1879ರ ನ್ಯಾಯಾಲಯ ತೀರ್ಪಿನ ಪ್ರಕಾರ (Supreme Court & H.C. Judgments & Definition of Hinduism: Gopal Narhar Safray v. Hanmal Ganesh Safray (1879) I.L.R. 3 Bom . 273) ಶೂದ್ರರಿಗೆ ಅನ್ವಯಿಸುವ ಹಿಂದು ಕಾನೂನನ್ನು ಲಿಂಗಾಯತರಿಗೆ ಅನ್ವಯಿಸಲಾಯಿತು. ಈ ಕಾರಣದಿಂದಾಗಿ ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು

ಹಳೆ ಮೈಸೂರಿನ ಲಿಂಗಾಯುತರು ಲಿಂಗೀಬ್ರಾಹ್ಮಣರಾಗುವ ಕನಸು ಕಾಣತೊಡಗಿದರು. ವಿರಕ್ತ ಮಠಗಳಲ್ಲಿ ಕೂಡ ಸಂಸ್ಕೃತ ಪಾಠಶಾಲೆಗಳನ್ನು ಪ್ರಾರಂಭಿಸಲಾಯಿತು. ಹೀಗಾಗಿ ಲಿಂಗಾಯತಕ್ಕೆ ಸಮಾನಾರ್ಥದಲ್ಲಿ ವೀರಶೈವ ಪದ ಬಳಕೆಯಾಗತೊಡಗಿತು.

ಆದರೆ ವೈದಿಕ ಮತ್ತು ಆಗಮಿಕ ಸಿದ್ಧಾಂತಗಳಿಗೆ ವಿರುದ್ಧವಾದ ಕಾಯಕ ಸಿದ್ಧಾಂತದ ಲಿಂಗಾಯತ ಧರ್ಮವು ಜಾತಿಸಂಕರವಾದ ಧರ್ಮವಾಗಿದೆ. ಜಗತ್ತಿನ ಯಾರು ಬೇಕಾದರೂ ಈ ಧರ್ಮದ ಅನುಯಾಯಿಗಳಾಗಬಹುದು. "ಜೈನಧರ್ಮ ಮತ್ತು ಬೌದ್ಧಧರ್ಮಗಳು ಖಂಡಿತವಾಗಿಯೂ ಹಿಂದೂ ಅಥವಾ ವೈದಿಕ ಧರ್ಮಗಳಲ್ಲ" ಎಂದು ಭಾರತದ ಮೊದಲ ಪ್ರಧಾನಿಯಾಗಿದ್ದ ಜವಾಹರಲಾಲ್ ನೆಹರೂ ಅವರು 'ಎಸ್ಸೆ ಆನ್ ಹಿಂದೂ ರಿಲಿಜನ್'ನಲ್ಲಿ ಹೇಳಿದ್ದಾರೆ. ಈ ಎರಡೂ ಧರ್ಮಗಳು ವೇದ ಪ್ರಾಮಾಣ್ಯವನ್ನು ಮತ್ತು ಸವರ್ಣೀಯರ ಜಾತಿ ಮತ್ತು ವರ್ಣಗಳ ಮೇಲುರಿಮೆಯನ್ನು ಒಪ್ಪದೆ ಇರುವುದರಿಂದ ಇವುಗಳನ್ನು ಸಂವಿಧಾನಬದ್ಧ ಸ್ವತಂತ್ರ ಧರ್ಮಗಳೆಂದು ಪರಿಗಣಿಸಲಾಗಿದೆ. ಇದೇ ಕಾರಣದಿಂದ ಸಿಖ್ ಧರ್ಮವನ್ನು ಕೂಡ ಸ್ವತಂತ್ರ ಧರ್ಮವೆಂದು ಸಾರಲಾಗಿದೆ.

ಜೈನ, ಬೌದ್ಧ ಮತ್ತು ಸಿಖ್ ಧರ್ಮಗಳ ಹಾಗೆಯೆ ಲಿಂಗಾಯತ ಧರ್ಮ ಕೂಡ ವೈದಿಕ ಧರ್ಮದಲ್ಲಿನ ಜಾತಿ, ಅಸ್ಪೃಶ್ಯತೆ ಮುಂತಾದ ಅನಿಷ್ಟ ಪದ್ಧತಿಗಳನ್ನು ವಿರೋಧಿಸುತ್ತ ವೈದಿಕ ವಿರೋಧಿ ಚಳವಳಿಯುನ್ನೇ ಪ್ರಾರಂಭಿಸಿದ ಹಿನ್ನೆಲೆಯುಳ್ಳದ್ದಾಗಿದೆ.



# ಇಷ್ಟಲಿಂಗದ ವಿವಿಧ ಆಯಾಮಗಳು

ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ
ವಿಶುದ್ಧ ಆಜ್ಞೆ ಎಂದೆಂಬರು.
ಈ ಆರ ಬಲ್ಲಡೆ ನೀವು ಹೇಳಿರೆ:
ಆಯನುಳ್ಳಡೆ ಆಧಾರ;
ಆಧಾರವ ಕೂಡಿಪ್ಪುದೆ ಸ್ವಾಧಿಷ್ಠಾನ;
ಮಣಿಯ ಬೆಳಗಿನಲ್ಲಿಪ್ಪುದೆ ಮಣಿಪೂರಕ;
ಆಸೆಯಿಲ್ಲದುದೆ ಅನಾಹತ.
ಅಲ್ಲ ಅಹುದೆಂಬುದನತಿಗಳೆಯದಿಹುದೆ ವಿಶುದ್ಧಿ.
ಸರ್ವಜೀವಂಗಳಲ್ಲಿ ದಯವನುಳ್ಳಡೆ ಆಜ್ಞೆ,
ಇಂತಿಪ್ಪುದೀಗ ಶಿವಯೋಗ.
ಉಳಿದ ಅಭ್ಯಾಸಯೋಗಿಗಳ ಕಂಡು ನಗುತಿರ್ದೆನಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.

–ಸಿದ್ಧರಾಮ

ಸ್ವರ್ಗ, ನರಕ ಮತ್ತು ಕರ್ಮಸಿದ್ಧಾಂತದ ಮೇಲೆ ನಿಂತ ಸಮಾಜ ಸಹಜವಾಗಿಯೇ ವರ್ಗ, ವರ್ಣ, ಜಾತಿ ವಿಜಾತಿಗಳಲ್ಲಿ ಒಡೆದು ಹೋಗಿದ್ದನ್ನು ಕಂಡುಕೊಂಡ ಬಸವಣ್ಣನವರು ಧರ್ಮವನ್ನು ಸಾಮಾಜೀಕರಣಗೊಳಿಸುವ ಮೂಲಕ ನವಸಮಾಜದ ನಿರ್ಮಾಣ ಮಾಡಿದರು. ಈ ನವಸಮಾಜ ನಿರ್ಮಾಣಕ್ಕಾಗಿ ನಡೆಸಿದ ವಚನ ಚಳವಳಿಯ ಮಂಥನದಲ್ಲಿ ಹೊಸ ಜೀವನವಿಧಾನವೊಂದು ಜನ್ಮತಾಳಿತು. ಅದಕ್ಕೆ ಲಿಂಗವಂತ, ಲಿಂಗಾಯತ, ಕಾಯಕ, ಶರಣ ಮತ್ತು ಬಸವಧರ್ಮ ಎಂದು ಕರೆಯಲಾಯಿತು.

ಈ ಶರಣಧರ್ಮದಲ್ಲಿ ಸ್ವರ್ಗ, ನರಕ, ಪುಣ್ಯ, ಪಾಪ, ಮೋಕ್ಷ, ಪುನರ್ಜನ್ಮ, ಸಂಚಿತ–ಪ್ರಾರಬ್ಧ–ಆಗಾಮಿ ಕರ್ಮಗಳು ಮತ್ತು ಅವುಗಳಿಂದ ಉತ್ಪತ್ತಿಯಾಗುವ ವರ್ಗ ಮತ್ತು ಜಾತಿ ವ್ಯವಸ್ಥೆ ಮುಂತಾದವು ಮಾನಸಿಕವಾದವುಗಳು. ನಿಜದ ನೆಲೆಯಲ್ಲಿ ಅವುಗಳಿಗೆ ಬೆಲೆ ಇಲ್ಲ. ಆಶ್ಚರ್ಯವೆಂದರೆ ಇಲ್ಲಿ ವೈದಿಕರಂತೆ ಪೂಜೆ ಮಾಡುವ ವಿಧಾನವೂ ಇಲ್ಲ. ಮನಸ್ಸಿನೊಳಗಿನ ಕಲ್ಮಷಗಳನ್ನು ತೆಗೆದುಹಾಕಲು ಮನಸ್ಸಿನೊಳಗೇ ಹೋಗಬೇಕು. ನಮ್ಮನ್ನು ನಾವು ನಮ್ಮೊಳಗಿನ ಅಂತಃಸಾಕ್ಷಿಯ ಜೊತೆ ಪೂಜೆ (ಶೂನ್ಯ) ಮಾಡಿಕೊಳ್ಳಬೇಕು ಎಂಬುದು ಈ ಲಿಂಗವಂತ ಧರ್ಮದ ಆಶಯವಾಗಿದೆ. ಅಂತೆಯೆ ಬಲ್ಲವರು 'ಇಷ್ಟಲಿಂಗ ಪೂಜೆ ಮಾಡಿ' ಎಂದು

ಹೇಳುವುದಿಲ್ಲ. ಅವರು ಹೇಳುವುದು 'ಇಷ್ಟಲಿಂಗ ಪೂಜೆ ಮಾಡಿಕೊಳ್ಳಿ' ಎಂದು. ನಿಜವಾದ ಅರ್ಥದಲ್ಲಿ ಈ ಧರ್ಮದಲ್ಲಿ ಪೂಜೆ ಮಾಡುವಂತಿಲ್ಲ. ಏನಿದ್ದರೂ ಪೂಜೆ ಮಾಡಿಕೊಳ್ಳುವಂಥದ್ದಿದೆ.

ಹೀಗೆ ನಾವು ನಮ್ಮ ಅಂತಃಸಾಕ್ಷಿಯ ಜೊತೆ ಒಂದಾಗುವುದರ ಮೂಲಕ ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದಗಳ ಕ್ರೌರ್ಯದ ಅರಿವಾಗುವುದು ಎಂಬುದನ್ನು ಬಸವಣ್ಣನವರು ಅನೇಕ ವಚನಗಳಲ್ಲಿ ಸೂಚಿಸಿದ್ದಾರೆ. ಸಮರತಿ, ಸಮಕಳೆ ಮತ್ತು ಸಮಸುಖ ಎಂಬ ಅನುಭವ ಮತ್ತು ಅನುಭಾವದ ಈ ಅರಿವೇ ಇಷ್ಟಲಿಂಗಪೂಜೆ ಮಾಡಿಕೊಳ್ಳುವುದರ ಫಲ ಎಂದು ಸಾರಿದ್ದಾರೆ. ಲಿಂಗಪೂಜೆ ಮಾಡಿಕೊಳ್ಳುವುದರಿಂದ 'ನದಿಯೊಳಗೆ ನದಿ ಬೆರೆಸಿದ ಹಾಗೆ' ಇಡೀ ಮಾನವಕುಲ ಒಂದಾಗಿ ಹೋಗುವುದು ಎಂದು ತಿಳಿಸಿದ್ದಾರೆ. ಇಷ್ಟಲಿಂಗಪೂಜೆಯಿಂದ ಎಲ್ಲ ಅಸಮಾನತೆಗಳಿಗೆ ಕಾರಣವಾದ ಕರ್ಮಸಿದ್ಧಾಂತವೆಂಬ ಮಹಾಮೋಸದ ಅರಿವಾಗುವುದು ಎಂಬುದನ್ನು ಒತ್ತಿ ಹೇಳಿದ್ದಾರೆ. 'ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆ ಅದೇತಕೊ' ಎಂದು ಬಸವಣ್ಣನವರು ಅಸಮಾಧಾನ ವ್ಯಕ್ತಪಡಿಸಿದ್ದಾರೆ.

ಬಸವಣ್ಣನವರು ಅನೇಕ ಗುರಿಗಳ ಸಾಧನೆಗಾಗಿ ಇಷ್ಟಲಿಂಗದ ಸೃಷ್ಟಿ ಮಾಡಿದರು. ಕಾಯಕಜೀವಿಗಳನ್ನು ಮಂದಿರ ವ್ಯವಸ್ಥೆಯಿಂದಾಗುವ ಶೋಷಣೆಯಿಂದ ವಿಮೋಚನೆಗೊಳಿಸುವುದು, ಮೂಢನಂಬಿಕೆಗಳಿಂದ ಹೊರತರುವುದು, ಕರ್ಮಸಿದ್ಧಾಂತದ ತೊಡಕುಗಳಿಂದ ಬಿಡಿಸಿಕೊಳ್ಳುವುದು, ಅಸ್ಪೃಶ್ಯತೆ, ಜಾತೀಯತೆ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಶೋಷಣೆಯನ್ನು ತಡೆಗಟ್ಟುವುದು ಇಷ್ಟಲಿಂಗಯೋಗದ ಮುಖ್ಯ ಉದ್ದೇಶವಾಗಿತ್ತು. ಈ ಎಲ್ಲ ವೈರುಧ್ಯಗಳನ್ನು ಎದುರಿಸಲು ಬೇಕಾದ ಮಾನಸಿಕ ಸ್ಥಿರತೆ ಮತ್ತು ವೈಚಾರಿಕ ಶಕ್ತಿಯನ್ನು ಇಷ್ಟಲಿಂಗಯೋಗದ ಅರಿವಿನಿಂದ ಪಡೆಯಬೇಕೆಂಬುದು ಬಸವಣ್ಣನವರ ಆಶಯವಾಗಿತ್ತು. ಅವರ ಈ ಆಶಯವನ್ನು ಸಿದ್ಧರಾಮರು ಮೇಲಿನ ವಚನದಲ್ಲಿ ಎತ್ತಿ ಹಿಡಿದಿದ್ದಾರೆ.

ಇಷ್ಟಲಿಂಗಯೋಗವು ಎಲ್ಲ ಯೋಗಗಳಿಗಿಂತ ಮಹತ್ವದ್ದು. ಏಕೆಂದರೆ ಆತ್ಮ ಮತ್ತು ಪರಮಾತ್ಮನ ಮಧ್ಯೆ ಇರುವ ಸಕಲಜೀವರಾಶಿಯನ್ನು ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಸಕಲಜೀವಾತ್ಮರಿಗೆ ಲೇಸನ್ನು ಬಯಸುವ ವಿಧಾನವನ್ನು ತಿಳಿಸುತ್ತದೆ. ಆ ಸಕಲಜೀವಾತ್ಮರೊಳಗೆ ಮಾತ್ರ ಬದುಕು ಅರ್ಥಪೂರ್ಣವಾಗುವುದು ಎಂಬ ಸಂದೇಶವನ್ನು ಸಾರುತ್ತದೆ.

ಈ ಕಾರಣದಿಂದಲೇ ಸಿದ್ಧರಾಮರು, ಶಿವಯೋಗ ಎಂಬ ಇಷ್ಟಲಿಂಗಯೋಗ, ಅಂದರೆ ನಾವು ಇಡೀ ಜೀವಸಂಕುಲದ ಪ್ರಜ್ಞೆಯೊಂದಿಗೆ

ಅಂತಃಸಾಕ್ಷಿಯ ಜೊತೆ ಒಂದಾಗುವ ಪ್ರಕ್ರಿಯೆ ಎಂಬುದನ್ನು ಮೇಲಿನ ವಚನದಲ್ಲಿ ಸೂಚಿಸಿದ್ದಾರೆ.

ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ ಮತ್ತು ಆಜ್ಞೆ ಎಂಬ ಯೋಗಚಕ್ರಗಳನ್ನೂ ಸಿದ್ಧರಾಮರು ಸಾಮಾಜೀಕರಣಗೊಳಿಸುತ್ತಾರೆ! ಸರ್ವಜೀವಗಳ ಬಗ್ಗೆ ದಯೆ ಸೃಷ್ಟಿಸುವುದರ ಕಡೆಗೇ ಅವರ ಗಮನವಿದೆ. ಇದುವೇ ಲಿಂಗಗಮನ.

ದಯೆ ಮತ್ತು ಶೋಷಣೆ ಒಂದೆಡೆ ಇರಲಾರವು. ಶೋಷಕರು ಬಡವರಿಗೆ ಅನ್ನ ಬಟ್ಟೆ ಹಂಚುವುದು ದಯೆ ಅಲ್ಲ. ಶೋಷಣೆಯಿಲ್ಲದ ಸಮಾಜವೇ ದಯಾಸಮಾಜ. ಹೀಗೆ 'ದಯೆ' ಎಂಬ ಶಬ್ದದ ಮೇಲೆ ಶರಣಧರ್ಮ ನಿಂತಿದೆ. ದಯೆ ಇಲ್ಲದ ವಿದ್ಯೆ ಮತ್ತು ಜ್ಞಾನ ನಿರರ್ಥಕ. ಅಂತೆಯೆ ಬಸವಣ್ಣನವರು ದಯಾಪೂರ್ಣವಾದ ಲಿಂಗತತ್ತ್ವವನ್ನು ಸೃಷ್ಟಿಸಿದರು. ಈ ತತ್ತ್ವಾಚರಣೆಯ ಮೂಲಕ ದೇವರಿಗೆ ಹರಕೆ ಹೊರಬೇಕಿಲ್ಲ. ಒಂದು ಪೈಸೆ ಕೂಡ ದೇವರ ಪೂಜೆಗಾಗಿ ಖರ್ಚು ಮಾಡಬೇಕಿಲ್ಲ. ದೇಹವೇ ದೇವಾಲಯವಾಗಿರುವುದರಿಂದ ದೊಡ್ಡ ಮಂದಿರಗಳನ್ನು ಕಟ್ಟಿ ಶೋಷಣೆ ಮತ್ತು ಮೂಢನಂಬಿಕೆಗಳಿಗೆ ಅವಕಾಶ ಕಲ್ಪಿಸಬೇಕಿಲ್ಲ.

ಸಾಮಾಜಿಕ ಮೇಲು ಕೀಳು ಎತ್ತಿಹಿಡಿಯುವ ಮನುವಾದಿ ವೈದಿಕ ವ್ಯವಸ್ಥೆಯನ್ನು ಎಲ್ಲ ರೀತಿಯಿಂದಲೂ ಬಗ್ಗುಬಡಿಯುವಂಥ ಲಿಂಗಸೂತ್ರವನ್ನು ಬಸವಣ್ಣನವರು ಕಂಡುಹಿಡಿದರು.

ವೈದಿಕ ವ್ಯವಸ್ಥೆ ನಿರಂತರವಾದ ಮಾನಸಿಕ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಸುಲಿಗೆಯ ಮೇಲೆ ನಿಂತಿದೆ. ಈ ಎಲ್ಲ ತೆರನಾದ ಶೋಷಣೆಯನ್ನು ತಡೆಯುವ ಶಕ್ತಿ ಇಷ್ಟಲಿಂಗಕ್ಕಿದೆ. ಇಷ್ಟಲಿಂಗಯೋಗದಿಂದ ಮನೋಧೈರ್ಯ ಪಡೆದ ದಲಿತ ಮೂಲದ ಶರಣೆ ಸತ್ಯಕ್ಕ ಕಸಗುಡಿಸುವ ಕಾಯಕದ ಮೂಲಕವೇ ನಮಗೆಲ್ಲ ಬದುಕಿನ ಪಾಠ ಕಲಿಸುತ್ತಾಳೆ. ಹುಲ್ಲು ಮಾರುವ ಸೋಮಣ್ಣ, ಮಡಿವಾಳ ಮಾಚಿದೇವ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ ಮುಂತಾದ ಶರಣರು ಇಂಥ ಇಷ್ಟಲಿಂಗಯೋಗದಿಂದ ಪಡೆದ ಮನೋದಾರ್ಢ್ಯದಿಂದಲೇ ಸುಲಿಗೆ ವ್ಯವಸ್ಥೆಯನ್ನು ಎದುರಿಸುವ ಸಾಮರ್ಥ್ಯ ಪಡೆದರು. ಕ್ರಿಯಾಶೀಲರಾಗಿ ಉತ್ಪಾದನೆಯಲ್ಲಿ ತೊಡಗಿದರು ಮತ್ತು ವಚನ ರಚನೆ ಮಾಡಿದರು. ಈ ಇಷ್ಟಲಿಂಗಯೋಗ ಶಕ್ತಿಯ ಅರಿವಾದ ನಂತರವೇ ಸಿದ್ಧರಾಮರು ಹಿಮಾಲಯದ ಕಡೆಗೆ ಮತ್ತು ಗುಹೆಗಳ ಬಳಿಗೆ ಕರೆದೊಯ್ಯುವ ಯೋಗಾಭ್ಯಾಸಿಗಳನ್ನು ಕಂಡು ನಗುತ್ತಾರೆ ಮತ್ತು ಇಷ್ಟಲಿಂಗಯೋಗದ ಸಾಮಾಜಿಕ ಶಕ್ತಿಯ ಮಹತ್ವವನ್ನು ಅರಹುತ್ತಾರೆ.

ಇಷ್ಟಲಿಂಗವು ಜಾತಿ ಮತ್ತು ವರ್ಗದ ಎಲ್ಲೆಗಳನ್ನು ನಿರ್ನಾಮಮಾಡಿ ಸಕಲ ಕಾಯಕಜೀವಿಗಳನ್ನು ಒಂದು ಮಾಡಿತು. ಮಂದಿರ ಮತ್ತು ಮೂಢನಂಬಿಕೆ

ಮುಂತಾದ ಶೋಷಣೆಗಳಿಂದ ಮುಕ್ತಗೊಳಿಸಿತು ಎಂಬುದನ್ನು ಜಗತ್ತಿಗೆ ಸಾರಿ ಹೇಳುವ ಕಾಲ ಇದಾಗಿದೆ.

ಇಂದು ಭಾರತದ ಬಹುಜನರ ಬಡತನಕ್ಕೆ ಕಣ್ಣಿಗೆ ಕಾಣುವ ದೇವರುಗಳು ಮತ್ತು ಅವುಗಳ ಮೂಲಕ ಮೂಢನಂಬಿಕೆಗಳನ್ನು ಜನಮನದಲ್ಲಿ ಬಿತ್ತುವ ಪಂಚಾಂಗಪಟುಗಳು, ಭವಿಷ್ಯಕಾರರು ಮತ್ತು ಪುರೋಹಿತಶಾಹಿಗಳು ಕಾರಣರಾಗಿದ್ದಾರೆ. ದೇಶದ ಪಂಚವಾರ್ಷಿಕ ಯೋಜನೆಗಳಿಗೆ ತಗಲುವ ಹಣಕ್ಕಿಂತಲೂ ಹೆಚ್ಚಿನ ಹಣವನ್ನು ಈ ದೇಶದ ಜನ ಮೂಢನಂಬಿಕೆಗಳಿಗಾಗಿ ಖರ್ಚು ಮಾಡುತ್ತಿದ್ದಾರೆ. ಅಂತೆಯೆ ಬಸವಣ್ಣನವರು ಮಠಗಳಿಲ್ಲದ, ಸ್ವಾಮಿಗಳಿಲ್ಲದ, ಗುಡಿಗಳಿಲ್ಲದ, ಮೂರ್ತಿಪೂಜೆ ಇಲ್ಲದ, ಕರ್ಮಸಿದ್ಧಾಂತವಿಲ್ಲದ, ಪಂಚಾಂಗಗಳಿಲ್ಲದ, ವರ್ಗ, ವರ್ಣ ಮತ್ತು ಲಿಂಗಭೇದಗಳಿಲ್ಲದ ಲಿಂಗವಂತ ಧರ್ಮ ಎಂಬ ಜೀವನವಿಧಾನವನ್ನು ಕಂಡುಹಿಡಿದರು.

ವ್ಯಕ್ತಿ, ಕುಟುಂಬ, ಸಮಾಜ ಮತ್ತು ಚರಾಚರವನ್ನೆಲ್ಲ ಒಳಗೊಂಡ ಜೀವಜಾಲ ಸಂರಕ್ಷಣೆಯ ಜೀವನ ವಿಧಾನ ಇದಾಗಿದೆ. ಇಲ್ಲಿ ರಕ್ತಸಂಬಂಧದವರಿಗಿಂತ ತತ್ತ್ವಸಂಬಂಧದವರೇ ಹೆಚ್ಚಿನ ಅಣ್ಣ, ಅಕ್ಕ, ಅಪ್ಪ, ಬೊಪ್ಪ ಆಗುತ್ತಾರೆ. ಇದು ಅತ್ಯಂತ ನವೀನವಾದ ವಿಶ್ವಕುಟುಂಬ ಧರ್ಮವಾಗಿದೆ. ಈ ಧರ್ಮದಲ್ಲಿ ಮಠಗಳ ಜಾಗದಲ್ಲಿ ಮಹಾಮನೆ ಇದೆ. ಸ್ವಾಮಿಗಳ ಜಾಗದಲ್ಲಿ ತತ್ತ್ವಜಂಗಮರಿದ್ದಾರೆ. ಮಂದಿರದ ಜಾಗದಲ್ಲಿ ಅರಿವಿನ ಮನೆ ಇದೆ. ದಾನದ ಬದಲಿಗೆ ದಾಸೋಹ ಇದೆ. ಸ್ಥಾವರದ ಬದಲಿಗೆ ಇಷ್ಟಲಿಂಗವಿದೆ. ಕರ್ಮಸಿದ್ಧಾಂತವನ್ನು ಅಲ್ಲಗಳೆಯುವ ಕಾಯಕಸಿದ್ಧಾಂತವಿದೆ. ಇಡೀ ಮಾನವಕುಲವನ್ನು ಒಂದುಮಾಡುವ ಗುರಿ ಇದೆ.



# ಪುರೋಹಿತಶಾಹಿಗಳ ಶಬ್ದಜಾಲ

"ವೇದಂಗಳ ಹಿಂದೆ ಹರಿಯದಿರು,
ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು,
ಪುರಾಣಂಗಳ ಹಿಂದೆ ಬಳಸದಿರು, ಬಳಸದಿರು,
ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು
ಸೌರಾಷ್ಟ್ರ ಸೋಮೇಶ್ವರನ ಕೈವಿಡಿದು
ಶಬ್ದಜಾಲಂಗಳಿಗೆ ಬಳಲದಿರು, ಬಳಲದಿರು."

ಎಂದು ಶರಣ ಆದಯ್ಯನವರು ೧೨ನೇ ಶತಮಾನದಲ್ಲೇ ಹೇಳಿದ್ದಾರೆ. ಬಸವಣ್ಣನವರ ಲಿಂಗವಂತ ಧರ್ಮ ಸೇರುವ ಮೊದಲು ಶೈವರಾಗಿದ್ದ ಇವರು ವೇದ, ಶಾಸ್ತ್ರ, ಪುರಾಣ ಮತ್ತು ಆಗಮಗಳ ಹಿಂದೆ ಹರಿದಾಡಿ, ಸುಳಿದಾಡಿ, ತೊಳಲಿ, ಬಳಲಿ ಬಂದವರೇ ಆಗಿದ್ದಾರೆ. ಇವು 'ಶಬ್ದಜಾಲ' ಎಂದು ಸ್ವಾನುಭವದಿಂದ ಕರೆದಿದ್ದಾರೆ. ಮನುಷ್ಯರ ಮೆದುಳಿಗೆ ಶಬ್ದಗಳ ಮೂಲಕ ಜಾಲ ಬೀಸಿ ಬೌದ್ಧಿಕ ಗುಲಾಮಗಿರಿಗೆ ತಳ್ಳುವಂಥವು ಇವೆಲ್ಲ ಎಂಬುದನ್ನು ಸೂಚಿಸಿದ್ದಾರೆ.

"ವೇದದವರನೊಲ್ಲದೆ ನಮ್ಮ ಮಾದಾರ ಚೆನ್ನಯ್ಯಂಗೊಲಿದ. ಶಾಸ್ತ್ರದವರನೊಲ್ಲದೆ ನಮ್ಮ ಶಿವರಾತ್ರಿ ಸಂಕಣ್ಣಂಗೊಲಿದ, ಆಗಮದವರನೊಲ್ಲದೆ ತೆಲುಗು ಜೊಮ್ಮಯ್ಯಂಗೊಲಿದ" ಹೀಗೆ ಕೆಳಜಾತಿ, ಕೆಳವರ್ಗದವರಿಗೆ ಒಲಿದ ದೇವರು "ಹಾರುವಣ್ಣಗಳಿಗೆ ಹೇಸಿ ಕದವನಿಕ್ಕಿಕೊಂಡನು" ಎಂದು ಸೊಡ್ಡಳ ಬಾಚರಸ ಹೇಳುತ್ತಾರೆ.

"ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ, ಸಕಲ ವೇದ ಶಾಸ್ತ್ರವೆಂಬ ನೇಣ ಕಟ್ಟಿ ಹಿಡಿದು ತೂಗಿ ಜೋಗುಳವಾಡುತ್ತಾ ಇದ್ದಾಳೆ ಭ್ರಾಂತಿ ಎಂಬ ತಾಯಿ" ಎಂದು ಅಲ್ಲಮಪ್ರಭುಗಳು ವೇದಗಳು ಮತ್ತು ಮನುಸ್ಮೃತಿಯಂಥ ಶಾಸ್ತ್ರಗಳು ಹೇಗೆ ಅಜ್ಞಾನ ಮತ್ತು ಭ್ರಾಂತಿಯ ಜೊತೆಗಿವೆ ಎಂಬುದನ್ನು ಸೂಚಿಸಿದ್ದಾರೆ.

"ವೇದ ಶಾಸ್ತ್ರ ಆಗಮಂಗಳನೋದಿದವರು ಹಿರಿಯರೆ? .. .. .. ಡೊಂಬನೇನು ಕಿರಿಯನೆ?" ಎಂದು ಬಸವಣ್ಣನವರು ಪ್ರಶ್ನಿಸುತ್ತ ಜನಸಾಮಾನ್ಯರ ಅನುಭವಜನ್ಯ ಜ್ಞಾನವನ್ನು ಎತ್ತಿಹಿಡಿದಿದ್ದಾರೆ. "ಏನಯ್ಯಾ ವಿಪ್ರರು ನುಡಿದಂತೆ

ನಡೆಯರು" ಎಂದು ಟೀಕಿಸಿದ್ದಾರೆ. "ವಿಪ್ರರು ಕೀಳು ನೋಡಾ ಜಗವೆಲ್ಲ ಅರಿಯಲು" ಎಂದು ಸಾರಿದ್ದಾರೆ.

"ವೇದ ನಡನಡುಗಿತ್ತು ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತ್ತಯ್ಯಾ!
ತರ್ಕ ತರ್ಕಿಸಲರಿಯದೆ ಮೂಗುವಟ್ಟೆದ್ದಿತ್ತಯ್ಯಾ!
ಆಗಮ ಹೊರತೊಲಗಿ ಅಗಲಿದ್ದಿತ್ತಯ್ಯಾ!
ನಮ್ಮ ಕೂಡಲಸಂಗಯ್ಯನು ಮಾದಾರ ಚೆನ್ನಯ್ಯನ ಮನೆಯಲ್ಲುಂಡ ಕಾರಣ."

ಎಂದು ಬಸವಣ್ಣನವರು ವೈದಿಕರು ಸೃಷ್ಟಿಸಿದ ಅಮಾನವೀಯ ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಟೀಕಿಸುತ್ತಾರೆ. ಮನುವಾದಿ ಸಮಾಜದ ಕಟ್ಟಕಡೆಯ ಮಾದಾರ ಜಾತಿಯಿಂದ ಬಂದ ಮಾದಾರ ಚೆನ್ನಯ್ಯನವರ ಮನೆಯಲ್ಲಿ ದೇವರು ಉಣ್ಣುವ ವಿಚಾರದ ಮೂಲಕ ಬಸವಣ್ಣನವರು ಇಡೀ ವರ್ಣ ಮತ್ತು ಜಾತಿ ವ್ಯವಸ್ಥೆಯನ್ನು ತಿರಸ್ಕರಿಸುತ್ತಾರೆ. "ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ, ನಿಮ್ಮಿಂದಧಿಕ ಕೂಡಲಸಂಗಮದೇವಾ" ಎಂದು ಹೇಳಿದ ಬಸವಣ್ಣನವರು ವ್ಯಕ್ತಿಯೊಬ್ಬ ತನ್ನ ಘನತೆಯಿಂದ ಉನ್ನತ ಸ್ಥಾನ ಹೊಂದುವನು ಹೊರತಾಗಿ ಮೇಲ್ಜಾತಿಯಲ್ಲಿ ಜನಿಸಿದ ಮಾತ್ರಕ್ಕೆ ದೊಡ್ಡವನಾಗುವುದಿಲ್ಲ ಎಂದು ಸೂಚಿಸಿದ್ದಾರೆ.

"ಧರ್ಮಸ್ಯ ಬ್ರಾಹ್ಮಣೋ ಮೂಲಂ।
ಬ್ರಾಹ್ಮಣಃ ಸಂಭವೇನಮ್ಯೈವ ದೇವಾನುನಾಮಪಿ ದೈವತಂ।
ಪ್ರಮಾಣ ಚ್ಯೈವ ಲೋಕಸ್ಯ ಬ್ರಹ್ಮಾತ್ರ್ಯೈವ ಹಿ ಕರಣಂ॥

–ಮನುಸ್ಮೃತಿ (೧೧.೮೩, ೮೪)

(ಬ್ರಾಹ್ಮಣನೇ ಧರ್ಮದ ಮೂಲ. ತನ್ನ ಹುಟ್ಟಿನಿಂದಲೇ ಅವನು ದೇವತೆಗಳಿಗೂ ದೇವರಾಗಿದ್ದಾನೆ. ಅವನ ಮಾತು ಜನರಿಗೆ ಪ್ರಮಾಣೀಭೂತವಾದುದು.)

ಎಂಬ ಮನುವಾದಿಗಳ ಮಾತು ಬಸವಣ್ಣನವರ ನಿಲವಿಗೆ ತದ್ವಿರುದ್ಧವಾದುದು. ಬಸವಾದಿ ಶರಣರು ಪ್ರತಿ ಹಂತದಲ್ಲೂ ವೇದ, ಆಗಮ ಮತ್ತು ಮನುಸ್ಮೃತಿಯನ್ನು ಅಲ್ಲಗಳೆಯುತ್ತ ಅವೈದಿಕವಾದವನ್ನು ಎತ್ತಿ ಹಿಡಿದಿದ್ದಾರೆ ಎಂಬ ಸತ್ಯವನ್ನು 'ಲಿಂಗಾಯತ, ವೀರಶೈವ ಮತ್ತು ಹಿಂದು' ಒಂದೇ ಎಂದು ಸಾಧಿಸಲು ಹೆಣಗುವ ಸಂಶೋಧಕ ಮಹಾಶಯರು ಅಲ್ಲಗಳೆಯಲು ಯಾವ ಕಾಲಕ್ಕೂ ಸಾಧ್ಯವಿಲ್ಲ.

ಕೆಲವರು ಭಗವದ್ಗೀತೆಯನ್ನು ರಾಷ್ಟ್ರಗ್ರಂಥ ಮಾಡಲು ಹೊರಟಿದ್ದಾರೆ. ಬಹುಧರ್ಮೀಯ ಮತ್ತು ಬಹುಸಂಸ್ಕೃತಿಯ ದೇಶದಲ್ಲಿ ಯಾವುದೇ ಒಂದು ಧರ್ಮದ ಗ್ರಂಥ ರಾಷ್ಟ್ರೀಯ ಗ್ರಂಥವಾಗಲಾರದು. ಸಂವಿಧಾನ ರಾಷ್ಟ್ರಗ್ರಂಥವಾಗಿರುವುದರಿಂದ ಎಲ್ಲ ಧರ್ಮ ಮತ್ತು ಧರ್ಮಗ್ರಂಥಗಳನ್ನು ರಕ್ಷಿಸುವ ಜವಾಬ್ದಾರಿ ಅದಕ್ಕಿದೆ. "ವೇದ ಶಾಸ್ತ್ರದವರ ಹಿರಿಯರೆನ್ನೆ, ಮಾಯಾಭ್ರಾಂತಿ ಕವಿದ

ಗೀತಜ್ಞರ ಹಿರಿಯರೆನ್ನೆ, ಇವರು ಹಿರಿಯರುಗಳೆ?" ಎಂದು ಬಸವಣ್ಣನವರು ವೇದ ಮತ್ತು ಗೀತೆಯ ಹಿರಿಮೆಯನ್ನು ಪ್ರಶ್ನಿಸಿದ್ದಾರೆ.

ವರ್ಣ, ಜಾತಿ ಮತ್ತು ಅಸ್ಪೃಶ್ಯತೆಗೆ ಜನ್ಮ ಜನ್ಮಾಂತರದ ಪುಣ್ಯ ಪಾಪಗಳೇ ಕಾರಣ ಎಂದು ಕರ್ಮಸಿದ್ಧಾಂತ ಹೇಳುತ್ತದೆ. ಈ ಕರ್ಮಸಿದ್ಧಾಂತವು ಮನುವಾದಿ ಹಿಂದುಧರ್ಮದ ತಾಯಿಬೇರಾಗಿದೆ. "ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡಾ ಪೂಜೆಯದೇಕೊ?" ಎಂದು ಬಸವಣ್ಣನವರು ಪ್ರಶ್ನಿಸುವ ಮೂಲಕ ಕರ್ಮಸಿದ್ಧಾಂತವನ್ನು ಕೊಚ್ಚಿಹಾಕಿದ್ದಾರೆ.

"ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ,
ಏಕಾದಶಿ ವ್ಯತೀಪಾತದಿಂದ ವೆಗ್ಗಳ,
ಸೂಕ್ಷ್ಮ ಶಿವಪಥನರಿದಂಗೆ
ಹೋಮ, ನೇಮ, ಜಪ, ತಪದಿಂದ ವೆಗ್ಗಳ
ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವಂಗೆ."

ಎಂದು ಬಸವಣ್ಣನವರು ಕೂಡಲಸಂಗಮದೇವರನ್ನು ನಿರಂತರವಾಗಿ ನೆನೆಯುವುದು ಇವೆಲ್ಲವುಗಳಿಗಿಂತ ವೆಗ್ಗಳ (ಅಧಿಕ) ಎಂದು ಹೇಳಿದ್ದಾರೆ. ಹೀಗೆ ಬಸವಾದಿ ಶರಣರು ಪುರೋಹಿತಶಾಹಿಯ ಎಲ್ಲ ಅನಿಷ್ಟಗಳ ವಿರುದ್ಧ ಬಂಡೆದ್ದಿದ್ದಾರೆ. ಪಂಚಾಂಗದ ಗುಲಾಮರು ತಮ್ಮ ಉದ್ಧಾರಕ್ಕಾಗಿ ಬಸವಣ್ಣನವರ ಈ ಮಾತಿನ ಕಡೆಗೆ ಗಮನ ಹರಿಸುವುದು ಅವಶ್ಯವಾಗಿದೆ.

"ಬ್ರಾಹ್ಮಣ ಭಕ್ತನಾದರೇನಯ್ಯಾ? ಸೂತ ಪಾತಕಂಗಳ ಬಿಡ.
ಕ್ಷತ್ರಿಯ ಭಕ್ತನಾದರೇನಯ್ಯಾ? ಕ್ರೋಧವ ಬಿಡ.
ವೈಶ್ಯ ಭಕ್ತನಾದರೇನಯ್ಯಾ? ಕಪಟವ ಬಿಡ.
ಶೂದ್ರ ಭಕ್ತನಾದರೇನಯ್ಯಾ? ಸ್ವಜಾತಿಯೆಂಬುದ ಬಿಡ.
ಇಂತೀ ಜಾತಿ ಡಂಬರ ಮೆಚ್ಚುವನೆ ಕೂಡಲಚೆನ್ನಸಂಗಮದೇವ."

ಎಂದು ಚೆನ್ನಬಸವಣ್ಣನವರು ಎಲ್ಲ ವರ್ಣೀಯರ ಬೂಟಾಟಿಕೆಯನ್ನು ಬಯಲಿಗೆಳೆದಿದ್ದಾರೆ.

"ಶಿವತಂತ್ರದಿಂದ ಸುಖದುಃಖಗಳು ಬರುತಿಹವೆಂದರಿಯದೆ
ನರಗುರಿಗಳಿಗೆ, ರೋಗ ದಾರಿದ್ರ್ಯ ಅಪಜಯಂಗಳು ಬರುತ್ತಿರಲು
ವಿಪ್ರಗೆ ಕೈಮುಗಿದು ಕಾಣಿಕೆಯನಿಕ್ಕಿ ತನ್ನ ಹೆಸರ ಹೇಳಿ
ಸೂರ್ಯಬಲ, ಚಂದ್ರಬಲ, ಬೃಹಸ್ಪತಿ ಬಲ, ನವಗ್ರಹ ಬಲವ
ಕೇಳುವವರಿಗೆ ಎಲ್ಲಿಹದೋ ಶಿವಭಕ್ತಿ?"

ಎಂದು ಚೆನ್ನಬಸವಣ್ಣನವರು, ಎಲ್ಲ ಶರಣರು ಪುರೋಹಿತಶಾಹಿಗಳ ಎಲ್ಲ ಕುತಂತ್ರಗಳನ್ನು ಬಯಲಿಗೆಳೆಯುವುದರ ಬಗ್ಗೆ ಅರಿವಿಲ್ಲವೆ ನಮ್ಮ ಕೆಲ ಪಂಡಿತರಿಗೆ?

"ಲಿಂಗಭಕ್ತನ ವಿವಾಹದಲ್ಲಿ ಶಿವಗಣಂಗಳಿಗೆ
ವಿಭೂತಿ ವೀಳೆಯವ ಕೊಟ್ಟು ಆರೋಗಣೆಯ ಮಾಡಿಸಿ
ಶಿವಗಣಂಗಳು ಸಾಕ್ಷಿಯಾಗಿ ಪ್ರಸಾದವನಿಕ್ಕುವುದೆ ಸದಾಚಾರವಲ್ಲದೆ
ವಾರ, ತಿಥಿ, ಸುಮುಹೂರ್ತವೆಂಬ ಲೌಕಿಕದ ಕರ್ಮವ ಮಾಡಿದಡೆ
ನಿಮ್ಮ ಸದ್ಭಕ್ತರಿಗೆ ದೂರವಯ್ಯಾ ಕೂಡಲಚೆನ್ನಸಂಗಮದೇವಾ."

ಎಂದು ಚೆನ್ನಬಸವಣ್ಣನವರು ಹೇಳುವ ಮೂಲಕ ಇಡೀ ಪಂಚಾಂಗ ವ್ಯವಸ್ಥೆಯನ್ನು ತಿರಸ್ಕರಿಸಿದ್ದಾರೆ.

"ಪಂಚಾಂಗ ಕೇಳಿದ ದಕ್ಷಬ್ರಹ್ಮನ ತಲೆಯೇಕೆ ಹೋಯಿತು? ಪಂಚಾಂಗ ಕೇಳಿದ ಪಂಚಪಾಂಡವರು ದೇಶಭ್ರಷ್ಟರಾದರೇಕೆ? ಪಂಚಾಂಗ ಕೇಳಿದ ಶ್ರೀರಾಮನ ಹೆಂಡತಿ ರಾವಣಗೆ ಸೆರೆಯಾದಳೇಕೆ?" ಎಂದು ಮುಂತಾಗಿ ನಿರಾಲಂಬ ಪ್ರಭುದೇವರು ಪಂಚಾಂಗದ ಅಸ್ತಿತ್ವವನ್ನೇ ಅಲ್ಲಗಳೆಯುತ್ತಾರೆ.

"ಸತ್ತು ಮಣ್ಣಾಗಿ ಹೋದ ಮಾತಾಪಿತರುಗಳು, ತಮ್ಮ ಸಂತಾನವಾಗಿ ಜನಿಸಿ ಬಂದರೆಂದು ಹೆತ್ತು ಹೆಸರಿಟ್ಟು ಕರೆವರಯ್ಯಾ. ಎಂದು ಮಡಿವಾಳ ಮಾಚಿದೇವರು ಪುನರ್ಜನ್ಮವಾದವನ್ನು ತಿರಸ್ಕರಿಸುತ್ತಾರೆ.

"ಉದಯ ಮಧ್ಯಾಹ್ನ ಸಂಧ್ಯಾಕಾಲವ ನೋಡಿ
ಮಾಡುವ ಕರ್ಮಿ ನೀ ಕೇಳಾ:
... .. ..
ಮಹಾಮೇರುವಿನ ಮರೆಯಲ್ಲಿರ್ದು
ತಮ್ಮ ನೆಳಲನರಸುವ ಭಾವಭ್ರಮಿತರ ಮೆಚ್ಚ
ನಮ್ಮ ಕೂಡಲಸಂಗಮದೇವ."

ಎಂದು ಬಸವಣ್ಣನವರು ತ್ರಿಕಾಲ ಸಂಧ್ಯಾವಂದನೆಯನ್ನು ತಿರಸ್ಕರಿಸುತ್ತಾರೆ. ವಾರ, ದಿನ, ಹಗಲು, ಇರುಳು "ಏನೆಂದರಿಯದೆ ನಿಮ್ಮುವ ಪೂಜಿಸಿ ಎನ್ನುವ ಮರೆದೆ ಕೂಡಲಸಂಗಮದೇವಾ" ಎಂದು ಇನ್ನೊಂದು ವಚನದಲ್ಲಿ ಬಸವಣ್ಣನವರು ಹೇಳುವ ಮೂಲಕ "ಕೂಡಲಸಂಗನ ಶರಣರು ಅಚ್ಚ ಲಿಂಗೈಕ್ಯರು" ಎಂಬುದನ್ನು ಸೂಚಿಸಿದ್ದಾರೆ.

"ಭಕ್ತಿಯ ಪಿತ್ತ ತಲೆಗೇರಿ ಕೈಲಾಸ ಬಟ್ಟೆಯ ಹತ್ತುವ ವ್ಯರ್ಥರ ಕಂಡು ಎನ್ನ ಮನ ನಾಚಿತ್ತು, ನಾಚಿತ್ತು. ಕೈಲಾಸವೆಂಬುದೇನೋ ಪೃಥ್ವಿಯ ಮೇಲೊಂದು ಮೊರಡಿ" ಎಂದು ಬಸವಣ್ಣನವರು ಕೈಲಾಸದ ಅಸ್ತಿತ್ವವನ್ನೇ ಅಲ್ಲಗಳೆದಿದ್ದಾರೆ.

"ಕೈಲಾಸವೆಂಬುದೊಂದು ಭೂಮಿಯೊಳಗಿರುವ ಹಾಳುಬೆಟ್ಟ, ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು. ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ' ಎಂದು ಸಿದ್ಧರಾಮೇಶ್ವರರು ಹೇಳುತ್ತಾರೆ.

"ಜಲ ದೈವವೆಂದಡೆ ಶೌಚವ ಮಾಡಲಿಲ್ಲ. ನೆಲ ದೈವವೆಂದಡೆ ಕಾಲೂರಿ ನಡೆಯಲಿಲ್ಲ." ಎಂದು ಮುಂತಾಗಿ ಮಡಿವಾಳ ಮಾಚಿದೇವರು ಹೇಳುವ ಮೂಲಕ ಪಂಚಮಹಾಭೂತಗಳ ದೈವತ್ವವನ್ನು ಅಲ್ಲಗಳೆಯುತ್ತಾರೆ.

"ಕಲ್ಲುದೇವರು ದೇವರಲ್ಲ, ಮಣ್ಣು ದೇವರು ದೇವರಲ್ಲ
ಮರ ದೇವರು ದೇವರಲ್ಲ, ಪಂಚಲೋಹದಲ್ಲಿ ಮಾಡಿದ ದೇವರು ದೇವರಲ್ಲ.
ಸೇತುರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದಲಾಗಿ
ಅಷ್ಟಾಷಷ್ಟಿ ಕೋಟಿ ಪುಣ್ಯಕ್ಷೇತ್ರಂಗಳಲ್ಲಿಯ ದೇವರು ದೇವರಲ್ಲ.
ತನ್ನ ತಾನರಿದು ತಾನಾರೆಂದು ತಿಳದಡೆ ತಾನೇ ದೇವ ನೋಡಾ
ಅಪ್ರಮಾಣಕೂಡಲಸಂಗಮದೇವಾ."

ಎಂದು ಬಾಲಸಂಗಯ್ಯನವರು ಇತ್ತೀಚಿನ ಶತಮಾನಗಳಲ್ಲಿ ಹಿಂದೂಧರ್ಮ ಎಂದು ಕರೆಯಿಸಿಕೊಳ್ಳುವ ವೈದಿಕ ಅಥವಾ ಮನುಧರ್ಮದ ಎಲ್ಲವನ್ನೂ ಅಲ್ಲಗಳೆಯುತ್ತಾರೆ.

ತಮ್ಮದು ಸ್ವತಂತ್ರ ಧರ್ಮ ಅಥವಾ ಜೀವನವಿಧಾನ ಎಂಬುದನ್ನು ಶರಣರು ಸಹಸ್ರಾರು ವಚನಗಳಲ್ಲಿ ಸಾಬೀತುಪಡಿಸಿದ್ದಾರೆ. ಆದರೆ ಕೆಲ ಸಂಶೋಧಕರು ಸ್ವತಂತ್ರಧರ್ಮಗಳಾದ ಹಿಂದು, ವೀರಶೈವ ಮತ್ತು ಲಿಂಗಾಯತ ಧರ್ಮಗಳನ್ನು ಒಂದೆಡೆ ಕಟ್ಟಿಹಾಕಲು ಶತಪ್ರಯತ್ನ ಮಾಡುತ್ತಿದ್ದಾರೆ.

ವರ್ಣ, ಕುಲ, ಮತ, ಜಾತಿ ಮತ್ತು ಉಪಜಾತಿಗಳಲ್ಲೇ ಉಸಿರಾಡುವ ಜನರನ್ನು ಒಟ್ಟಾರೆಯಾಗಿ 'ಹಿಂದು' ಎಂದು ಕರೆಯುವ ಮೂಲಕ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಸ್ವಾರ್ಥಸಾಧಿಸುವಲ್ಲಿ ಶತಮಾನಗಳಿಂದ ಯಶಸ್ಸನ್ನು ಗಳಿಸಿವೆ. ಹಬ್ಬ ಹರಿದಿನಗಳು ಮತ್ತು ಇತರೆ ಸಾಂಪ್ರದಾಯಿಕ ಸಂಬಂಧಗಳು ಇವರನ್ನು ಒಂದುಗೂಡಿಸಿರುವುದರಿಂದ 'ಹಿಂದು' ಎಂಬ ಒಂದೇ ಒಂದು ಶಬ್ದಜಾಲದಲ್ಲಿ ಇವರೆನ್ನೆಲ್ಲ ಹಿಡಿದಿಡುವಲ್ಲಿ ಶೋಷಕ ಶಕ್ತಿಗಳು ಸಫಲವಾಗಿವೆ. ಬ್ರಾಹ್ಮಣರಲ್ಲಿನ ತ್ರಿಮಸ್ಥರೇ ಒಂದಾಗಿ ಇರಲು ಸಾಧ್ಯವಿಲ್ಲ. ದ್ವೈತ, ಅದ್ವೈತ ಮತು ವಿಶಿಷ್ಟಾದ್ವೈತ ಮತಗಳ ಮಧ್ಯದ ಜಿಜ್ಞಾಸೆ ಶತಮಾನಗಳಿಂದ ಮುಂದುವರಿಯುತ್ತಲೇ ಇದೆ. ಈ ತ್ರಿಮತಗಳ ನಿಲವು ಭಿನ್ನ ವಿಭಿನ್ನವಾಗಿವೆ. ಇನ್ನು ಉಳಿದ ಸಹಸ್ರಾರು ಜಾತಿ ಉಪಜಾತಿಗಳಲ್ಲಿನ ವೈರುಧ್ಯಗಳು ಜನಜೀವನದ ಮಧ್ಯೆ ಭಾರಿ ಕಂದರಗಳನ್ನೇ ಉಂಟುಮಾಡಿವೆ. ದಲಿತರು, ಹಿಂದುಳಿದವರು ಮತ್ತು ಇತರೆ ಹಿಂದುಳಿದವರು ದಿನನಿತ್ಯ ಸಂಪ್ರದಾಯಗಳ ದೈಹಿಕ ಮತ್ತು ಮಾನಸಿಕ ಹಿಂಸೆಗೆ ಬಲಿಯಾಗುತ್ತಲೇ ಇರುತ್ತಾರೆ. ಇಂಥ ಅನಿಷ್ಟಗಳ ಕಡೆಗೆ ಗಮನ ಹರಿಸಿ ಸಮಾನತೆಯ ಬದುಕನ್ನು ಸಾಧಿಸುವುದಕ್ಕಾಗಿ ಬದುಕನ್ನು ಸವೆಸದೆ ಅಸತ್ಯವನ್ನು ಸತ್ಯ ಎಂದು ಹೇಳುವುದಕ್ಕೇ ಬದುಕನ್ನು ಮುಡಿಪಾಗಿಡುವುದು ಅಸಹ್ಯಕರವಾದುದು.

ಆದರೆ ಈ ಎಲ್ಲ ವೈರುಧ್ಯಗಳನ್ನು ತಿರಸ್ಕರಿಸುವ 'ಲಿಂಗಾಯತ' ಎಂಬ ಸರ್ವಸಮತ್ವದಿಂದ ಕೂಡಿದ ಹೊಸ ಜೀವನವಿಧಾನದ ಧರ್ಮವನ್ನು ಸ್ಥಾಪಿಸಲು ಬಸವಾದಿ ಶರಣರು ತಮ್ಮ ಇಡೀ ಬದುಕನ್ನು ಸವೆಸಿದರು. ಈ ಮಾನವಧರ್ಮದ ನಿಜಸ್ವರೂಪವನ್ನು ಉಳಿಸಿಕೊಳ್ಳುವುದಕ್ಕಾಗಿ ಶ್ರಮಿಸುವುದು ಪ್ರತಿಯೊಬ್ಬ ಮಾನವತಾವಾದಿಯ ಆದ್ಯ ಕರ್ತವ್ಯವಾಗಿದೆ. ಹಿಂದೂಧರ್ಮದ ಹೆಸರಿನಲ್ಲಿ ತಲೆಯೆತ್ತುತ್ತಿರುವ ಕೋಮುವಾದಿಗಳು ಮತ್ತು ಇಸ್ಲಾಂಧರ್ಮದ ಹೆಸರಿನಲ್ಲಿ ತಲೆಯೆತ್ತುತ್ತಿರುವ ಮೂಲಭೂತವಾದಿಗಳು ಹೆಚ್ಚಿದಂತೆಲ್ಲ ಶರಣ ಮತ್ತು ಸೂಫಿ ಸಿದ್ಧಾಂತಗಳಿಗೆ ಗಂಡಾಂತರ ಬಂದೊದಗುವುದರಲ್ಲಿ ಸಂಶಯವಿಲ್ಲ.

ಸೂಫಿ, ಶರಣ, ದಾಸ ಮತ್ತು ಸಂತರ ಭಕ್ತಿಪಂಥ ಆಂತರ್ಯದಲ್ಲಿ ಅತ್ಯಂತ ಕ್ರಾಂತಿಕಾರಿಯಾಗಿದೆ. ಭಕ್ತಿಪಂಥ ಚಳವಳಿಯಿಂದಾಗಿಯೆ ಇಲ್ಲಿಯವರೆಗೆ ದೇಶ ಕೋಮುವಾದಿಗಳು ಮತ್ತು ಮೂಲಭೂತವಾದಿಗಳ ಹಿಡಿತಕ್ಕೆ ಸಿಗದೆ ಹೋಗಿದೆ. ಲೋಕಾಯತರು, ಬುದ್ಧ ಮತ್ತು ಭಕ್ತಿ ಚಳವಳಿಗಳು ರಕ್ಷಿಸಿದ ಭಾರತವನ್ನು ಕೋಮುವಾದಿ, ಮೂಲಭೂತವಾದಿ ಮತ್ತು ಉಗ್ರಗಾಮಿ ಶಕ್ತಿಗಳ ಹಿಡಿತಕ್ಕೆ ಸಿಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ಪ್ರಜ್ಞಾವಂತರ ಆದ್ಯ ಕರ್ತವ್ಯವಾಗಿದೆ. ಅದಕ್ಕಾಗಿ ಸೂಫಿ, ಶರಣ, ದಾಸ, ಸಂತ ಮತ್ತು ತತ್ತ್ವಪದಕಾರದ ಸಾಹಿತ್ಯದಿಂದ ಸ್ಫೂರ್ತಿ ಪಡೆಯುವುದು ಅವಶ್ಯವಾಗಿದೆ.



# ಖಾಸಗಿ ಆಸ್ತಿ ತಿರಸ್ಕರಿಸಿದ ಮೊದಲ ದಾರ್ಶನಿಕ ಬಸವಣ್ಣ

**The theory of Communism may be Summed up in one sentence : Abolish all private property.**

**- Karl Marx**

ಮಹಾನುಭಾವಿ ಪ್ರಧಾನಿ ಬಸವಣ್ಣನವರು ಒಂದು ವಿಸ್ಮಯ! ಅವರ ವ್ಯಕ್ತಿತ್ವಕ್ಕೆ ಎಷ್ಟೊಂದು ಆಯಾಮಗಳಿವೆ. ಧರ್ಮ, ದರ್ಶನ, ಮುತ್ಸದ್ದಿ, ಆಡಳಿತ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಮನೋವಿಜ್ಞಾನ, ಸಾಮಾಜಿಕ ಮನೋವಿಜ್ಞಾನ, ಚಳವಳಿ, ವೈದಿಕ ವಿರೋಧಿ ಸೈದ್ಧಾಂತಿಕ ಹೋರಾಟ ಮುಂತಾದವು ಅವರ ವ್ಯಕ್ತಿತ್ವದ ವಿವಿಧ ಮಗ್ಗಲುಗಳಾಗಿವೆ. ವ್ಯಕ್ತಿತ್ವದ ಈ ಮಗ್ಗಲುಗಳನ್ನು ಅವರು ಒಂದು ಮಾನವೀಯ ಉದ್ದೇಶಕ್ಕಾಗಿ ಬಳಸಿಕೊಂಡರು. ಖಾಸಗಿ ಆಸ್ತಿ ಇರುವವರೆಗೆ 'ದಯೆ' ಎಂಬುದು ಆ ಕ್ಷಣದ ಕಳವಳ ಎಂಬ ವಾಸ್ತವ ಅವರಿಗೆ ಮನವರಿಕೆಯಾಗಿತ್ತು. ಅಂತೆಯೆ ಅವರು 'ದೇವರೇ ಧರ್ಮದ ಮೂಲ' ಎನ್ನದೆ 'ದಯೆಯೆ ಧರ್ಮದ ಮೂಲ' ಎಂದರು. ಆ ಮೂಲಕ ದಯೆಯ ನಿಜಾರ್ಥವನ್ನು ತಿಳಿಸಿದರು. ಇದರರ್ಥ 'ಖಾಸಗಿ ಆಸ್ತಿಯ ನಿರ್ಮೂಲನವೇ ಮಾನವಧರ್ಮದ ಮೂಲ' ಎಂದಾಗುತ್ತದೆ. ಆದ್ದರಿಂದ ಬಸವಧರ್ಮವು ನಿಜವಾದ ಅರ್ಥದಲ್ಲಿ ಮಾನವಧರ್ಮವೇ ಆಗಿದೆ. ಅದು ಅನನ್ಯವಾದ ವಿಶ್ವಜೀವನ ವಿಧಾನವಾಗಿದೆ. ಬಸವಣ್ಣನವರ ಪರಿಕಲ್ಪನೆಯ ದಯೆ ಇಂಗ್ಲಿಷ್‌ನ kindness ಗೆ ಸೀಮಿತವಾಗಿಲ್ಲ. ಬಸವಧರ್ಮದಲ್ಲಿ ಇದು ಅನುಭಾವಿಕ ನೆಲೆಯಲ್ಲಿ ಸಮಜೋ ರಾಜಕೀಯ ಅರ್ಥಶಾಸ್ತ್ರದ ಪ್ರಜ್ಞೆಯೊಂದಿಗೆ ಸಕಲಜೀವಾತ್ಮರಿಗೆ ಲೇಸನೆ ಬಯಸುವಂಥ ಸರ್ವಸಮತ್ವದ ಅರ್ಥ ಕೊಡುವ ಶಬ್ದವಾಗಿದೆ. ಹೀಗೆ ಬಸವಧರ್ಮದಲ್ಲಿ ದಯೆಯು ಸಕಲ ಜೀವಾತ್ಮರಿಗೆ ತೋರುವ ವಿಶ್ವಪ್ರೇಮವೇ ಆಗಿದೆ.

'ದಾನ' ಎಂಬುದು ಖಾಸಗಿ ಆಸ್ತಿಯ ಪ್ರಜ್ಞೆಯೊಂದಿಗೆ ಬರುವ ಕನಿಕರ. ಆದರೆ ದಾಸೋಹ ಎಂಬುದು ಸಮರ್ಪಣಾ ಭಾವದ ದಯೆ. ಒಕ್ಕುಮಿಕ್ಕ ತೃಪ್ತಿಯೊಂದಿಗೆ ದಾಸೋಹಂಭಾವದಲ್ಲಿ ತನ್ನಲ್ಲಿರುವುದನ್ನು ಸಮಾಜಕ್ಕೆ ಅರ್ಪಿಸುವವನು ಬಸವಧರ್ಮದಲ್ಲಿ ಭಕ್ತ ಎನಿಸಿಕೊಳ್ಳುತ್ತಾನೆ. ಕೊಡುವವನು ಸಮರ್ಪಣಾ ಭಾವದ ಭಕ್ತನಾದರೆ ಪಡೆದುಕೊಳ್ಳುವವನು ಸಮಾಜವನ್ನು ಪ್ರತಿನಿಧಿಸುವ ಮಾನವರೂಪಿ ದೇವರು! ಆದ್ದರಿಂದ ಇಡೀ ಬಸವಧರ್ಮ ತ್ರಿವಿಧ ದಾಸೋಹದ

ಮೇಲೆ ನಿಂತಿದೆ. ತನು ಮನ ಧನವನ್ನು ಗುರು ಲಿಂಗ ಜಂಗಮಕ್ಕೆ ಅರ್ಪಿಸುವುದೇ ತ್ರಿವಿಧ ದಾಸೋಹ. ಬಸವಣ್ಣನವರು ಇದಕ್ಕೇ ಭಕ್ತಿ ಎಂದು ಕರೆದಿದ್ದಾರೆ. ಬಸವಧರ್ಮದ ಪ್ರಕಾರ ಅರಿವೇ ಗುರು, ತತ್ತ್ವವೇ ಲಿಂಗ, ಸಮಾಜವೇ ಜಂಗಮ. ಕಾಯಕದ ಮೂಲಕ ಸಂಪಾದಿಸುವುದನ್ನು ಜ್ಞಾನಕ್ಕಾಗಿ, ತತ್ತ್ವಕ್ಕಾಗಿ ಮತ್ತು ಸಮಾಜಕ್ಕಾಗಿ ವಿನಿಯೋಗಿಸುವುದೇ ತ್ರಿವಿಧ ದಾಸೋಹ.

ಸಕಲ ಜೀವಾತ್ಮರನ್ನು ಒಳಗೊಂಡ ಸಮಾಜವೇ ಅವರಿಗೆ ದೇವಸ್ವರೂಪವಾಗಿ ಕಂಡಿದೆ. ಅಂತೆಯೆ ಬಸವಣ್ಣನವರು "ಇನ್ನು ಜಂಗಮವೆ ಲಿಂಗವೆಂದು ನಂಬಿದೆ" ಎಂದು ತಿಳಿಸಿದ್ದಾರೆ. ಅವರಿಗೆ ಅಂತಿಮವಾಗಿ ಸಮಾಜವೇ ದೇವರಾಗಿತ್ತು. "ಜಂಗಮಲಿಂಗ ದರುಶನ (ಸಮಾಜವೆಂಬ ದೇವರ ದರ್ಶನ) ಬಸವಣ್ಣಂಗಲ್ಲದೆ ಉಳಿದವರಾರಿಗೆಯೂ ಅಳವಡದು" ಎಂದು ಚೆನ್ನಬಸವಣ್ಣನವರು ಹೇಳಬೇಕಾದರೆ ಬಸವಣ್ಣನವರ ಸಮಾಜಮುಖಿ ವ್ಯಕ್ತಿತ್ವ ಎಂಥ ಅದ್ವಿತೀಯ ಎಂಬುದರ ಅರಿವಾಗದೆ ಇರದು.

ದಾಸೋಹಿಯಾಗಬೇಕಾದವನು ಅನೇಕ ಷರತ್ತುಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ತಾನು ಭಕ್ತ, ತನ್ನಿಂದ ಪಡೆದುಕೊಳ್ಳುವಾತ ಜಂಗಮಲಿಂಗದ ಅಂಶ ಎಂದು ಮನಸಾರೆ ಭಾವಿಸಬೇಕು. 'ನಾನು ದಾಸ' ಎಂಬ ಭಾವನೆ ಬಂದಾಗಲೆ ಅಹಂಕಾರ ನಿರಸನವಾಗುವುದು. ಭಕ್ತನಾದವನ ಮೊದಲ ಅರ್ಹತೆ ಇದು.

**ಸಮಾಜದ ಸಂಪತ್ತು:** "ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು; ನಿಮ್ಮ ಸೊಮ್ಮಿಂಗೆ (ಶಿವನಿಧಿಗೆ) ಸಲಿಸುವೆನು" ಎಂಬ ಪ್ರತಿಜ್ಞೆಯೊಂದಿಗೆ ಮಿಗುತಾಯ ಮೌಲ್ಯ (Surplus Value) ವನ್ನು ವ್ಯಕ್ತಿಗತ ಸಂಪತ್ತು ಎಂದು ಪರಿಗಣಿಸದೆ ಸಮಾಜದ ಸಂಪತ್ತು ಎಂದು ಪರಿಗಣಿಸುವುದು. ಹೀಗೆ ಶಿವನಿಧಿ ಎಂಬುದು ಸಮಾಜದ ಸಂಪತ್ತಿನ ಪ್ರತೀಕವಾಗುವುದು.

ಒಕ್ಕುಮಿಕ್ಕ ಪ್ರಸಾದವನ್ನು ಸ್ವೀಕರಿಸುವುದು ಎಂದರೆ ತಾನು ಸಂಪಾದಿಸಿದ್ದನ್ನು ದೇವರ ಕಾಣಿಕೆ ಎಂಬ ನಂಬಿಕೆಯೊಂದಿಗೆ ಶರಣಸಂಕುಲವೆಂಬ ಸರ್ವಸಮತ್ವದ ಸಮಾಜಕ್ಕೆ 'ಜಂಗಮಲಿಂಗ' ಎಂದು, ಅಂದರೆ 'ಸಮಾಜವೇ ದೇವರು' ಎಂದು ಒಪ್ಪಿಸಿ ಮಿಕ್ಕಿದ್ದನ್ನು ಪ್ರಸಾದ ರೂಪದಲ್ಲಿ ಪಡೆದುಕೊಂಡು ಸಂತೃಪ್ತನಾಗುವುದು!

"ಆನೆ, ಭಂಡಾರ, ಲಾಯದ ಕುದುರೆಯು ಬೇಡುವವರಿಲ್ಲದೆ ಬಡವಾದೆನಯ್ಯಾ" ಎಂದು ಬಸವಣ್ಣನವರು ಹೇಳುತ್ತಾರೆ. ಬಸವಣ್ಣನವರಂಥ ಮಹಾನುಭಾವಿಗಳ ಪ್ರಕಾರ ಸಂಪತ್ತಿನ ಗುಲಾಮರೇ ನಿಜವಾದ ಬಡವರು. ಹೀಗೆ ಬಸವಣ್ಣನವರು ಖಾಸಗಿ ಆಸ್ತಿಯನ್ನು ತಿರಸ್ಕರಿಸುತ್ತಾರೆ. "ಉಳ್ಳವರು ಶಿವಾಲಯವ ಮಾಡಿಹರು, ನಾನೇನು ಮಾಡಲಿ ಬಡವನಯ್ಯಾ" ಎಂದು ಹೇಳುವ ಮೂಲಕ ಕೆಳವರ್ಗೀಕರಣಕ್ಕೆ ಒಳಗಾಗುತ್ತಾರೆ. ಭಾರತೀಯ ಸಮಾಜದಲ್ಲಿ ವರ್ಗಪ್ರಜ್ಞೆಯ

ಬೀಜ ಬಿತ್ತುತ್ತಾರೆ. 'ಇಲ್ಲಿಯವರೆಗಿನ ಸಮಾಜಗಳ ಇತಿಹಾಸ, ವರ್ಗ ಹೋರಾಟಗಳ ಇತಿಹಾಸವೇ ಆಗಿದೆ' ಎಂದು ಕಾರ್ಲ್ ಮಾರ್ಕ್ಸ್ ಹೇಳಿದ್ದಾರೆ.

ಐರೋಪ್ಯ ಖಂಡದಲ್ಲಿ ವರ್ಗಪ್ರಜ್ಞೆ ಮೂಡಲು ಪ್ರಾರಂಭವಾದದ್ದು 13ನೇ ಶತಮಾನದಲ್ಲಿ. ಆದರೆ ಬಸವಣ್ಣನವರು 12ನೇ ಶತಮಾನದಲ್ಲೇ ಕನ್ನಡದ ನೆಲದಲ್ಲಿ ವರ್ಗಪ್ರಜ್ಞೆ ಮೂಡಿಸಿದ ಕೀರ್ತಿಗೆ ಭಾಜನರಾಗಿದ್ದಾರೆ.

ಜಂಗಮ ವಿಕಾರಿ: "ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ" ಎಂದು ಬಸವಣ್ಣನವರು ಹೇಳಿದ್ದಾರೆ. ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಮುಂತಾದ ಬದುಕಿನ ಎಲ್ಲ ಕ್ಷೇತ್ರಗಳಲ್ಲಿ ಸಮಾನತೆಯನ್ನು ಬಯಸುವವನೇ ಜಂಗಮ ವಿಕಾರಿ. ಇಂಥ ಜಂಗಮವಿಕಾರಿಗಳಿಗೆ ಸಂಪತ್ತಿನ ರೋಗವಿರುವುದಿಲ್ಲ. ಹೀಗಾಗಿ ಎಲ್ಲವೂ ಸಮಾಜದ ಸೊತ್ತಾಗಿರಬೇಕೆಂಬುದೇ ಅವರ ಆಶಯವಾಗಿರುತ್ತದೆ.

ಎನಗೆ ಬೇರೆ ಧನವಿಲ್ಲ: "ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ" ಎಂದು ಹೇಳುವ ಮೂಲಕ ಬಸವಣ್ಣನವರು ಖಾಸಗಿ ಆಸ್ತಿಯನ್ನು ಅಲ್ಲಗಳೆದು ಸಂಪತ್ತನ್ನು ಸಮಾಜವೆಂಬ ದೇವರ ಸೊತ್ತಾಗಿಸುತ್ತಾರೆ.

"ಜಂಗಮಕ್ಕಲ್ಲದೆ ಮಾಡೆನೀ ಧನವನು" ಎಂದು ಹೇಳುವ ಅವರು ತಮ್ಮಲ್ಲಿರುವ ಧನವು ಸಮಾಜದ ಸಂಪತ್ತಾಗಿರುವುದರಿಂದ ಅದು ಸಮಾಜಕ್ಕೇ ಸಲ್ಲುವಂಥದ್ದು ಎಂದು ಸ್ಪಷ್ಟಪಡಿಸುತ್ತಾರೆ. "ಪಸರಕ್ಕನುವಿಲ್ಲ ಬಂದ ತತ್ಕಾಲಕ್ಕೆ ಉಂಟು" ಎಂದು ಬಸವಣ್ಣನವರು ಹೇಳುವ ಮೂಲಕ ಲಿಂಗವಂತ ಧರ್ಮದಲ್ಲಿ ಧನಸಂಗ್ರಹಕ್ಕೆ ಅವಕಾಶವಿಲ್ಲ ಎಂದು ಸಾರಿದ್ದಾರೆ. ತಮ್ಮ ದೈನಂದಿನ ಬದುಕಿಗೆ ಬೇಕಾಗುವಷ್ಟು ಮಾತ್ರ ಅವರು ಇಟ್ಟುಕೊಂಡು ಉಳಿದುದೆಲ್ಲವನ್ನೂ 'ಶಿವನಿಧಿ' ಎಂಬ ಸಾಮಾಜಿಕ ಸಂಪತ್ತಿಗೆ ಒಪ್ಪಿಸಬೇಕು. ತಮಗೆ ತೊಂದರೆಯಾದಾಗ ಶಿವನಿಧಿಯಿಂದ ಪಡೆದು, ಅನುಕೂಲವಾದಾಗ ಶಿವನಿಧಿಗೆ ಮರಳಿಸಬೇಕು.

"ಧನವನಿರಿಸದಿರಾ, ಇರಿಸಿದಡೆ ಭವ ಬಪ್ಪುದು ತಪ್ಪದು" ಎಂದು ಬಸವಣ್ಣನವರು ಎಚ್ಚರಿಸುತ್ತಾರೆ. ಧನವು ವಸ್ತುಮೋಹವನ್ನು ಹೆಚ್ಚಿಸುವ ಮೂಲಕ ಮನುಷ್ಯರನ್ನು ಭವಪಾಶದಲ್ಲಿ ಸಿಲುಕಿಸುತ್ತದೆ. ಯುದ್ಧ, ಹಿಂಸೆ, ಕ್ರೌರ್ಯ, ಕೊಲೆ, ಸುಲಿಗೆ, ದೌರ್ಜನ್ಯ, ಅತ್ಯಾಚಾರ, ಹಸಿವು, ಬಡತನ, ಅನಾಥಪ್ರಜ್ಞೆ ಅಸಹಾಯಕತೆ ಮುಂತಾದವು ಭವದ ವಿವಿಧ ಮಗ್ಗಲುಗಳಾಗಿವೆ. ಸಂಪತ್ತಿನ ಆಸೆ ಎಂಬುದು ಭವದ ಬೀಜವಾಗಿ ವಿವಿಧ ರೀತಿಯಲ್ಲಿ ಕಾಡುತ್ತಲೇ ಇರುತ್ತದೆ.

"ಅಲ್ಲಿ ಉಂಬಡೆ ಸಂಗ, ಇಲ್ಲಿ ಉಂಬಡೆ ಸಂಗ, ಕೂಡಲಸಂಗಮದೇವ ಏಕೋಭಾವ" ಎಂದು ಬಸವಣ್ಣನವರು ಸಕಲ ಜೀವಾತ್ಮರನ್ನು ಒಂದೇ ಆಗಿ ಕಾಣುವುದರಿಂದಾಗಿಯೆ ಸಕಲ ಜೀವಿಗಳಿಂದ ಕೂಡಿದ ಲೋಕವೇ ಅವರಿಗೆ ಶಿವಸ್ವರೂಪಿಯಾಗಿ ಕಾಣುತ್ತದೆ. ಆದ್ದರಿಂದ ಸಂಪತ್ತು ಶ್ರೀಮಂತ ವರ್ಗದ ಸೊತ್ತಲ್ಲ.

ಆ ಸಂಪತ್ತನ್ನು ಉಪಯೋಗಿಸುವ ಹಕ್ಕು ಭೂಮಿಯ ಮೇಲಿನ ಪ್ರತಿಯೊಬ್ಬರಿಗೂ ಇದೆ ಎಂದು ಅವರು ಪ್ರತಿಪಾದಿಸುತ್ತಾರೆ.

**ಉಳ್ಳವರೇ ಕಳ್ಳರು:** ಕಳ್ಳರು ಆಕಳನ್ನು ಕದ್ದೊಯ್ದಾಗ ಅವರು ಆಡಿದ ಈ ಮಾತು ಹೊಸದೊಂದು ಸರ್ವಸಮಾನತೆಯ ಜಗತ್ತಿನ ದರ್ಶನವನ್ನು ಮಾಡಿಸುತ್ತದೆ. ಬಸವಣ್ಣನವರ ಪ್ರಕಾರ ಖಾಸಗಿ ಆಸ್ತಿಯನ್ನು ಹೊಂದಿದವನೇ ಕಳ್ಳ! "ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ ಕೂಡಲಸಂಗಮದೇವನಲ್ಲದೆ ಆರೂ ಇಲ್ಲ" ಎಂದು ಬಸವಣ್ಣನವರು ಹೇಳುವಲ್ಲಿ 'ಉಳ್ಳವರೇ ಕಳ್ಳರು' ಎಂಬ ಸತ್ಯದ ದರ್ಶನವಾಗುತ್ತದೆ. ಒಂದು ಸಮಾಜದಲ್ಲಿ ಮಕ್ಕಳು ಹಸಿವಿನಿಂದ ಸಾಯುವಾಗ, ಜನ ಕಂಗಾಲಾಗಿ ಆತ್ಮಹತ್ಯೆ ಮಾಡಿಕೊಳ್ಳುವಾಗ ಮತ್ತು ಕಾಯಕಜೀವಿಗಳು ಅಸಹಾಯಕರಾಗಿರುವಂಥ ವಾತಾವರಣ ಸೃಷ್ಟಿಯಾದಾಗ ಈ ಸತ್ಯದ ಅರಿವಾಗದೆ ಇರದು.

**ಕಡ ಬಡ್ಡಿಯ ಕೊಡಲಾಗದು:** "ಮೃಡಭಕ್ತರಿಗಲ್ಲದೆ ಕಡ ಬಡ್ಡಿಯ ಕೊಡಲಾಗದು. ಬಂದರೆ ಒಂದು ಲೇಸು, ಬಾರದಿರ್ದಡೆ ಎರಡು ಲೇಸು" ಎಂದು ಬಸವಣ್ಣನವರು ಹೇಳುವ ಮೂಲಕ ಬಡ್ಡಿ ಅಷ್ಟೇ ಅಲ್ಲ, ಕಡ ಕೊಡುವುದನ್ನೂ ನಿಷೇಧಿಸಿದ್ದಾರೆ. ಕಷ್ಟದಲ್ಲಿದ್ದವರಿಗೆ ದಾಸೋಹಂಭಾವದ ಮೂಲಕ ಸಹಾಯ ಮಾಡುವುದು ಭಕ್ತರ ನೈತಿಕ ಜವಾಬ್ದಾರಿಯಾಗಿದೆ ಎಂದು ತಿಳಿಸಿದ್ದಾರೆ. ಕಷ್ಟದಲ್ಲಿದ್ದವರು ತಮ್ಮ ಕಷ್ಟ ಪರಿಹಾರವಾದ ಮೇಲೆ ಖಂಡಿತ ತಂದುಕೊಡುತ್ತಾರೆ. ಇತರರಿಗೆ ಕೊಡಲು ಸಾಧ್ಯವಾಗುವಂಥ ಹಣ, ವ್ಯಕ್ತಿಯ ಹಣವಾಗಿ ಉಳಿಯದೇ ಸಹಜವಾಗಿಯೆ ಸಮಾಜದ ಸೊತ್ತಾಗಿರುತ್ತದೆ!

**ಹಂಗಿಲ್ಲದ ಬದುಕು:** "ಊರ ಮುಂದೆ ಹಾಲ ಹಳ್ಳ ಹರಿವುತ್ತಿರಲು ಬಿಜ್ಜಳನ ಭಂಡಾರವೆನಗೇಕಯ್ಯಾ" ಎಂದು ಹೇಳುವಲ್ಲಿ ಬಸವಣ್ಣನವರು ಕಾಯಕಜೀವಿಗಳು ಮತ್ತು ಬಿಜ್ಜಳನನ್ನು ಮುಖಾಮುಖಿಯಾಗಿಸುತ್ತಾರೆ. ಕಾಯಕಜೀವಿಗಳ ಶ್ರಮದಿಂದಲೇ ಬಿಜ್ಜಳನ ಭಂಡಾರ ತುಂಬುವುದರಿಂದ, ಅವರ ಶ್ರಮವಿಲ್ಲದೆ ಭಂಡಾರವಿಲ್ಲ ಎಂದು ಸೂಚಿಸುತ್ತಾರೆ. ಬಿಜ್ಜಳನ ಭಂಡಾರವೆನಗೇಕಯ್ಯಾ ಎಂದು ತಿಳಿಸುವ ಮೂಲಕ ಕಾಯಕಜೀವಿಗಳು ತಮ್ಮ ಶ್ರಮವನ್ನೇ ಆಶ್ರಯಿಸುತ್ತ, ಪ್ರಭುತ್ವದ ಹಂಗಿಲ್ಲದೆ ಬದುಕುವ ಮಾರ್ಗದ ಪ್ರಜ್ಞೆ ಮೂಡಿಸುತ್ತಾರೆ. ಆ ಮೂಲಕ 12ನೇ ಶತಮಾನದ ಊಳಿಗಮಾನ್ಯ (Feudal) ಪದ್ಧತಿಯ ರಾಜಸತ್ತೆಯನ್ನು ತಿರಸ್ಕರಿಸಿ, ಆ ವ್ಯವಸ್ಥೆಯ ಒಳಗೇ ಇದ್ದುಕೊಂಡು ಹೊಸ ಸಮಾಜದ ನಿರ್ಮಾಣ ಮಾಡುವುದು ಬಸವಣ್ಣನವರ ಉದ್ದೇಶವಾಗಿತ್ತು. ಶರಣಸಂಕುಲವೆಂಬ ಈ ನವಸಮಾಜದ ಸದಸ್ಯರು ರಾಜಸತ್ತೆಯ ಎಲ್ಲ ನಿಯಮಗಳನ್ನು ಪಾಲಿಸುತ್ತಿದ್ದರು. ಆದರೆ ಮಾನಸಿಕವಾಗಿ ರಾಜಸತ್ತೆಯ ನಿರಾಕರಣೆ ಮಾಡಿದ್ದರು.

"ಭಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ವಿರಹಿತ ಹೋಗಬಾರದು." ಎಂದು ಬಸವಣ್ಣನವರು ಹೇಳಿದ್ದಾರೆ. "ಕಳ್ಳನಾಣ್ಯ ಸಲುಗೆಗೆ ಸಲ್ಲದು; ಕಳ್ಳನಾಣ್ಯ ಸಲಲೀಯರಯ್ಯಾ" ಎಂದು ತಿಳಿಸಿದ್ದಾರೆ. ವ್ಯವಹಾರದಲ್ಲಿ ಕಳ್ಳನಾಣ್ಯವನ್ನು ನಿರ್ಬಂಧಿಸುತ್ತಾರೆ. ಅದು ಚಲಾವಣೆಗೆ ಯೋಗ್ಯವಲ್ಲ ಎಂದು ಹೇಳುತ್ತಾರೆ.

ಪ್ರಧಾನಿ ಬಸವಣ್ಣನವರು ರಾಜ್ಯವ್ಯವಸ್ಥೆಗೆ ಎಲ್ಲಿಯೂ ಧಕ್ಕೆಯುಂಟು ಮಾಡುವುದಿಲ್ಲ. ಆದರೆ ಆ ರಾಜಸತ್ತೆಯ ಹಂಗಿಲ್ಲದೆ ಬದುಕುವುದನ್ನು ಕಲಿಸುತ್ತಾರೆ! ಆ ಮೂಲಕ ಕೂಡಲಸಂಗನ ಶರಣರು ಸ್ವತಂತ್ರಧೀರರಾಗುತ್ತಾರೆ.

ಬಸವಣ್ಣನವರ ಜೊತೆಗಿದ್ದ ಶರಣ ಶರಣೆಯರೆಲ್ಲ ಅವರ ಮನೋಗತವನ್ನು ಅರಿತವರಾಗಿದ್ದರು ಎಂಬುದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ. "ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ?" ಎಂದು ಆಯ್ದಕ್ಕಿ ಲಕ್ಕಮ್ಮ ಕೇಳುತ್ತಾಳೆ. ಸಂಪತ್ತಿನ ಆಸೆ ಅರಸರಿಗಿರುತ್ತದೆ; ಆದರೆ ಶಿವಭಕ್ತರು ಆಸೆಯನ್ನು ಮೀರಿದ ಕಾರಣ ಆ ಖಾಸಗಿ ಸಂಪತ್ತನ್ನೇ ನಿರಾಕರಿಸುತ್ತಾರೆ. ಅಷ್ಟೇ ಅಲ್ಲದೆ ಆ ವ್ಯಕ್ತಿಗತ ಸಂಪತ್ತಿನ ವ್ಯವಸ್ಥೆಗೆ ಎದುರಾಳಿಯಾಗುತ್ತಾರೆ.

**ಬಡತನವಿದ್ದಡೆ ಒಡೆಯದೆ?:** "ಬೆಟ್ಟ ಬಲ್ಲಿತ್ತೆಂದಡೆ ಉಳಿಯ ಮೊನೆಯಲ್ಲಿ ಬಡತನವಿದ್ದಡೆ ಒಡೆಯದೆ?" ಎಂದು ಆಯ್ದಕ್ಕಿ ಲಕ್ಕಮ್ಮ ಪ್ರಶ್ನಿಸುತ್ತಾಳೆ. ರಾಜಸತ್ತೆ ಎಂಬ ಶಿಲಾಪರ್ವತ ಒಡೆಯಲು ಕಾಯಕಜೀವಿಗಳೆಂಬ ಉಳಿಗಳು ಒಂದಾಗಬೇಕು. ಉಳಿಯ ಮೊನೆ ತೀಕ್ಷ್ಣವಾಗಿರಬೇಕು. ಬಡತನವೇ ಆ ತೀಕ್ಷ್ಣತೆ! ಬಡವರು ಮಾತ್ರ ಈ ಜಗತ್ತನ್ನು ಬದಲಾಯಿಸುವ ಶಕ್ತಿಯನ್ನು ಹೊಂದಿರುತ್ತಾರೆ.

ಬಡವರು ಕಳೆದುಕೊಳ್ಳುವಂಥದ್ದು ಏನೂ ಇರುವುದಿಲ್ಲ. ದೈಹಿಕ ಮತ್ತು ಆತ್ಮಶಕ್ತಿಗಳೇ ಅವರ ಆಸ್ತಿ. ಬಡವರ ಆತ್ಮಶಕ್ತಿಯ ಮುಂದೆ ರಾಜಶಕ್ತಿಯ ಆಟ ನಡೆಯುವುದಿಲ್ಲ. ಇದರ ಅರಿವಾದ ಕೂಡಲೆ ರಾಜಶಕ್ತಿ ಹಿಂಸಾರೂಪ ತಾಳುವುದು. ಇದನ್ನರಿತ ಬಿಜ್ಜಳನ ರಾಜಶಕ್ತಿ ಹಿಂಸಾರೂಪ ತಾಳಿದ್ದರಿಂದಲೇ ಜಾಗೃತರಾಗಿದ್ದ ಕಾಯಕಜೀವಿ ಶರಣರ ಕೊಲೆ ಸುಲಿಗೆಗಳಾದವು. ಅವರ ವಚನ ಸಾಹಿತ್ಯದ ಬಹುಭಾಗವನ್ನು ಸುಟ್ಟುಹಾಕಲಾಯಿತು.

"ಸಮತೆಯೆಂಬುದೆ ಯೋಗದಾಗು ನೋಡಾ" ಎಂದು ಹಾವಿನಾಳ ಕಲ್ಲಯ್ಯನವರು ಹೇಳುತ್ತಾರೆ. ಯೋಗ ಎಂದರೆ ಕೂಡುವುದು. ಈ ಒಂದಾಗುವಿಕೆಯ ಪರಿಣಾಮವೇ ಸಮತೆ ಎಂಬುದನ್ನು ಶರಣರು ಮನಗಂಡಿದ್ದರು. ವ್ಯಕ್ತಿಗತ ಸಂಪತ್ತನ್ನು ಅಲ್ಲಗಳೆದು ಸಾಮಾಜಿಕ ಸಂಪತ್ತಿನ ಮೂಲಕ ಸಮಾನತೆಯನ್ನು ಸಾಧಿಸುವುದೇ ಶರಣರ ಉದ್ದೇಶವಾಗಿತ್ತು. ಆಯ್ದಕ್ಕಿ ಮಾರಯ್ಯನವರು ಹೇಳುವಂತೆ ಶರಣರಿಗೆ ಕಾಯಕವೇ ಕೈಲಾಸವಾಗಿತ್ತು.

ಇಂಥ ಒಂದು ದುಡಿಯುವ ಜನರ ಕೈಲಾಸದ ನಿರ್ಮಾಣವೇ ಬಸವಣ್ಣನವರ ಗುರಿಯಾಗಿತ್ತು. ಖಾಸಗಿ ಆಸ್ತಿಯನ್ನು ನಿರಾಕರಿಸುವ ಆತ್ಮಶಕ್ತಿಯಿಂದ ಮಾತ್ರ ಕಾಯಕಜೀವಿಗಳ ಕೈಲಾಸ ನಿರ್ಮಿಸಲು ಸಾಧ್ಯ ಎಂಬ ಮಹಾ ಕನಸನ್ನು ಜಗತ್ತಿನಲ್ಲಿ ಬಿತ್ತಿ, ಅದಕ್ಕೆ ಮಾದರಿಯಾದ ಶರಣಸಂಕುಲವನ್ನು ಸ್ಥಾಪಿಸಿ, ಆ ಕನಸು ನನಸಾಗಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟವರು ಬಸವಣ್ಣನವರು.

ಈ ಅನನ್ಯವಾದ ಚಳವಳಿಗೆ ಹೆದರಿದ ರಾಜಶಕ್ತಿ ಆ ಶರಣರ ಮುಂದೆ ವೈಚಾರಿಕವಾಗಿ ಸೋತಿತು. ಆದರೆ ದೈಹಿಕವಾಗಿ ಅವರ ಮೇಲೆ ಮಾರಣಾಂತಿಕ ದಾಳಿ ಮಾಡಿ ಹಿಂದೆಂದೂ ಕಾಣದಂಥ ಸಮಾನತೆಯ ವ್ಯವಸ್ಥೆಯನ್ನು ಹಾಳು ಮಾಡಿತು. ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಸಾತ್ವಿಕರ ಕೊಲೆ ಮಾಡಿ, ನವಮಾನವ ವ್ಯವಸ್ಥೆಯನ್ನು ಹಾಳು ಮಾಡಿದ ಇನ್ನೊಂದು ಘಟನೆ ಜಗತ್ತಿನ ಇತಿಹಾಸದಲ್ಲಿ ನಡೆದಿಲ್ಲ.

ಬಸವಣ್ಣನವರ ಸಮಾನತೆ, ಬಸವಣ್ಣನವರ ಸಮಾಜ, ಬಸವಣ್ಣನವರ ಅರ್ಥಶಾಸ್ತ್ರ, ಬಸವಣ್ಣನವರ ಅನುಭಾವ ಮತ್ತು ಬಸವಣ್ಣನವರ ಜೀವನವಿಧಾನ ಒಂದಿಲ್ಲ ಒಂದು ದಿನ ಜಗತ್ತಿಗೆ ಮಾರ್ಗದರ್ಶಿಯಾಗುವುದು. ಅದಕ್ಕಾಗಿ ಬಸವಾನುಯಾಯಿಗಳು ಕ್ರಿಯಾಶೀಲವಾಗಬೇಕು.



# ನಾ ಕಂಡ ಬಸವಣ್ಣ

ಬಸವಣ್ಣನವರು ನಮ್ಮ ಹಾಗೇ ಈ ಭೂಮಿಯಲ್ಲಿ ಜನಿಸಿ ನಮಗೆ ಕಲಿಸುತ್ತ ವಿಶ್ವಮಾನವರಾಗಿ ಬೆಳೆದವರು. ಎಲ್ಲರೂ ಶಿವಸ್ವರೂಪಿಗಳು ಎಂದು ಹೇಳುವ ಮೂಲಕ ಮಾನವಕುಲದಲ್ಲಿ ಸಮಾನತೆಯನ್ನು ಸಾಧಿಸಿದವರು. ಅವರಿಗೆ ಇದು ಹೇಗೆ ಸಾಧ್ಯವಾಯಿತು ಎಂಬುದನ್ನು ಅರಿತುಕೊಳ್ಳುವ ಜವಾಬ್ದಾರಿ 21ನೇ ಶತಮಾನದ ಜಗತ್ತಿಗೆ ಅತ್ಯವಶ್ಯವಾಗಿದೆ.

ಅವರು ಜನಿಸಿದ್ದು ಬಸವನಬಾಗೇವಾಡಿಯ ಅಗ್ರಹಾರದಲ್ಲಿ. ಅದು ಅಗ್ರಹಾರಗಳ ಅಗ್ರಹಾರವಾಗಿತ್ತು. ತಂದೆ ಮಾದರಸರು ಅಗ್ರಹಾರದ ಒಡೆಯರಾಗಿದ್ದರು. ತಾಯಿ ಮಾದಲಾಂಬಿಕೆಯ ತವರು ಮನೆ ಪಕ್ಕದ ಇಂಗಳೇಶ್ವರ. ಅವರದು ಆಗಮಿಕರ ಅಂದರೆ ಶೈವಬ್ರಾಹ್ಮಣರ ಮನೆತನ. ಇಲ್ಲಿಂದಲೇ ಅವರ ಬದಲಾವಣೆ ಪ್ರಾರಂಭವಾಗುವುದು. ಅಗ್ರಹಾರಕ್ಕೆ ಸೇವೆ ಮತ್ತು ಜೀವನಾವಶ್ಯಕ ಉತ್ಪನ್ನಗಳನ್ನು ಒದಗಿಸುವವರು ಅದು ಹೇಗೆ ಕನಿಷ್ಠ? ಅಂಥ ಸೇವೆ ಮತ್ತು ಉತ್ಪಾದನೆಗಳಲ್ಲಿ ತೊಡಗದ ಬ್ರಾಹ್ಮಣರು ಅದು ಹೇಗೆ ಗರಿಷ್ಠ? ಎಂಬ ಪ್ರಶ್ನೆಗಳು ಅವರನ್ನು ಕಾಡತೊಡಗಿದವು. ಬ್ರಾಹ್ಮಣ ಹೆಣ್ಣುಮಕ್ಕಳಿಗಿಂತ ಬ್ರಾಹ್ಮಣ ಪುರುಷರು ಅದು ಹೇಗೆ ಶ್ರೇಷ್ಠರು ಎಂಬ ಪ್ರಶ್ನೆ ಅವರ ಮನೆಯಿಂದಲೇ ಪ್ರಾರಂಭವಾಗಿತ್ತು. ಇನ್ನು ಸಮಾಜದಲ್ಲಿ ಶ್ರೀಮಂತರು ಮತ್ತು ಬಡವರು ಏಕಾಗುತ್ತಾರೆ ಎಂಬುದು ಅವರ ಮೂಲಭೂತ ಪ್ರಶ್ನೆಯಾಗಿತ್ತು. ಇವೆಲ್ಲವನ್ನು ಇಲ್ಲವಾಗಿಸಿ ಮಾನವ ಏಕತೆಯನ್ನು ಸಾಧಿಸುವುದೇ ಅವರ ಜೀವನದ ಗುರಿಯಾಯಿತು.

ಲಿಂಗವ ಪೂಜಿಸಿ ಫಲವೇನಯ್ಯಾ
ಸಮರತಿ ಸಮಕಳೆ ಸಮಸುಖವ ಅರಿಯದನ್ನಕ್ಕ?
ಲಿಂಗವ ಪೂಜಿಸಿ ಫಲವೇನಯ್ಯಾ
ಕೂಡಲಸಂಗಮದೇವರ ಪೂಜಿಸಿ
ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ?

ಈ ವಚನ ಅವರ ಬದುಕಿನ ಉದ್ದೇಶವನ್ನು ತಿಳಿಸುವಂಥದ್ದು. ಬಸವಣ್ಣನವರು ಲಿಂಗಪೂಜಾ ಫಲದ ಬಗ್ಗೆ ಈ ವಚನದಲ್ಲಿ ಹೇಳಿದ್ದಾರೆ. ಇಷ್ಟಲಿಂಗ ಪೂಜಾಫಲಗಳನ್ನು ನಾಲ್ಕು ವಿಧದಲ್ಲಿ ತಿಳಿಸುತ್ತಾರೆ. ಈ ವಚನಕ್ಕೆ ಲಿಂಗಾಂಗಸಾಮರಸ್ಯದ ಆನುಭಾವಿಕ ಅರ್ಥವೂ ಇದೆ. ಸಾಮಾಜಿಕ ಅರ್ಥವೂ

ಇದೆ. ಹೀಗೆ ಅವರ ವಚನಗಳು ವಿವಿಧ ಆಯಾಮಗಳಿಂದ ಕೂಡಿರುತ್ತವೆ. ಈಗ ಇಲ್ಲಿ ಅದರ ಸಾಮಾಜಿಕ ಅರ್ಥದ ವಿವರಣೆ ಇದೆ.

ಲಿಂಗಪೂಜಾ ಫಲ ನಾಲ್ಕು ಪ್ರಕಾರದ ಅರಿವಿನಿಂದ ಕೂಡಿದೆ. ಇಷ್ಟಲಿಂಗ ಪೂಜಕರು ಈ ಅರಿವನ್ನು ಪಡೆಯದಿದ್ದರೆ ಅವರಿಗೆ ಲಿಂಗಪೂಜಾ ಫಲವಿಲ್ಲ. ಇಲ್ಲಿ ಅರಿವೇ ಫಲವಾಗಿರುವುದರಿಂದ ಬೇರೆ ಫಲದ ನಿರೀಕ್ಷೆಯನ್ನು ಮಾಡಲಿಕ್ಕಾಗದು.

ಸಮರತಿ ಎಂದರೆ ಲಿಂಗಭೇದ ಮಾಡಬಾರದು ಎಂಬ ಅರಿವನ್ನು ಹೊಂದುವುದು. ಯಾವ ಪತಿಯೂ ತನ್ನ ಸತಿಗಿಂತ ಹೆಚ್ಚಿನವನಲ್ಲ. ಸತಿಪತಿ ಏಕೋಭಾವವಿರಬೇಕು. ಇಲ್ಲದಿದ್ದರೆ ಪತಿಯಾದವನು ಮೇಲುರಿಮೆಯ ಮನೋರೋಗದಿಂದ ಬಳಲುತ್ತ ಸತಿಯನ್ನು ಕೀಳುರಿಮೆಗೆ ತಳ್ಳುವನು. ಆಗ ಸಂಸಾರದಲ್ಲಿ ಏಕೋಭಾವ ಸಾಧ್ಯವಾಗುವುದಿಲ್ಲ.

ಸಮಕಳೆ ಎಂದರೆ ಸರ್ವರೂ ಹುಟ್ಟಿನಿಂದ ಸಮಾನರೆಂಬ ಅರಿವನ್ನು ಪಡೆಯುವುದು. ಬ್ರಹ್ಮಕಳೆ, ಕ್ಷಾತ್ರಕಳೆ ಎಂಬುದು ಇರುವುದಿಲ್ಲ. ಇರುವುದು ಮಾನವಕಳೆ ಮಾತ್ರ. ಆದ್ದರಿಂದ ಜಾತಿಭೇದ ಮತ್ತು ವರ್ಣಭೇದಗಳು ಕೃತ್ರಿಮವಾಗಿವೆ ಎಂಬುದನ್ನು ಪ್ರತಿಯೊಬ್ಬರು ಅರಿಯಬೇಕು.

ಸಮಸುಖ ಎಂದರೆ ಬಡತನ ಮತ್ತು ಶ್ರೀಮಂತಿಕೆ ಎಂಬ ವರ್ಗಗಳಿಂದ ಮಾನವರು ವಿಮೋಚನೆಗೊಂಡು ನಿಸರ್ಗದತ್ತ ಬದುಕನ್ನು ಸಮಾನವಾಗಿ ಹಂಚಿಕೊಂಡು ಬದುಕುವುದು. ಗಾಳಿ, ಬೆಳಕು, ತಂಗಾಳಿ, ಬೆಳದಿಂಗಳು, ಹೂವಿನ ಪರಿಮಳ, ಹಣ್ಣಿನ ರುಚಿ ಸರ್ವರಿಗೂ ಸಮಾನವಾದ ಸುಖವನ್ನೇ ಕೊಡುತ್ತವೆ. ಹಾಗೆ ನಿಸರ್ಗಕ್ಕೆ ಪೂರಕವಾದ ಬದುಕು ಇರಬೇಕು ಎಂಬುದು ಪ್ರತಿಯೊಬ್ಬರ ಅರಿವಿಗೆ ಬರಬೇಕು.

ಜಗತ್ತಿನ ಪ್ರತಿಯೊಬ್ಬರೂ ಭಾವೈಕ್ಯದಿಂದ ಬದುಕಬೇಕು ಎಂಬುದು ನಾಲ್ಕನೆಯ ಅರಿವು. ಈ ಅರಿವು ಬರಬೇಕಾದರೆ ಲಿಂಗಭೇದ, ಜಾತಿ/ವರ್ಣಭೇದ ಮತ್ತು ವರ್ಗಭೇದದಿಂದ ಮಾನವ ಮುಕ್ತನಾಗಬೇಕು. ಆಗ ನದಿಯೊಳಗೆ ನದಿ ಬೆರೆತ ಹಾಗೆ ಮಾನವರು ಅನ್ಯೋನ್ಯವಾಗಿ ಬೆರೆತು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುತ್ತ ಬದುಕನ್ನು ಹಸನಗೊಳಿಸುವರು.

ಹೀಗೆ ಮಾನವರನ್ನು ವಿಶ್ವಮಾನವರನ್ನಾಗಿಸುವ ಕನಸನ್ನು ಬಸವಣ್ಣನವರು ಕಂಡಿದ್ದರು. ಅಂತೆಯೆ ಅವರು ಅನನ್ಯವಾದ ಸಾಧನೆಗಳನ್ನು ಮಾಡಿದರು. ಮೊದಲಿಗೆ ಇಂಥ ಅರಿವಿನ ಮಾದರಿಯ ಶರಣಸಂಕುಲವನ್ನು ಸ್ಥಾಪಿಸುವ ಯೋಜನೆ ರೂಪಿಸಿದರು. ಅದಕ್ಕಾಗಿ ಕಾಯಕಜೀವಿಗಳನ್ನು ಸಂಘಟಿಸಿ ಅವರ ಮಧ್ಯದ ಭೇದಭಾವ ಇಲ್ಲವಾಗಿಸಿದರು. ಅವರ ಈ ಸಾಹಸಕ್ಕೆ ಮಧುವರಸರಂಥ ಬ್ರಾಹ್ಮಣರೂ ಮಹಾದೇವ ಭೂಪಾಲರಂಥ ಅರಸರೂ ಕೈಗೂಡಿಸಿದರು. ಹೀಗೆ ಬಸವಣ್ಣನವರು ವಿಶ್ವದಲ್ಲೇ

ಮೊದಲಬಾರಿಗೆ ದುಡಿಯುವ ವರ್ಗವನ್ನು ಸಂಘಟಿಸಿದರು. ಶರಣಸಂಕುಲ ಎಂಬ ನವಸಮಾಜದ ನಿರ್ಮಾಣ ಮಾಡಿ, ಶಿವನಿಧಿ ಎಂಬ ಸಾಮಾಜಿಕ ನಿಧಿಯನ್ನು ಸ್ಥಾಪಿಸಿ. ಪ್ರತಿಯೊಬ್ಬರು ತಮ್ಮಲ್ಲಿನ ಮಿಗುತಾಯ ಮೌಲ್ಯವನ್ನು ಶಿವನಿಧಿಗೆ ಅರ್ಪಿಸುವಂಥ ವ್ಯವಸ್ಥೆಯನ್ನು ತಂದರು. ಆ ಮೂಲಕ ವರ್ಗಭೇದವನ್ನು ಅಳಿಸಿದರು. ಇಷ್ಟಲಿಂಗವೆಂಬ ಮಾನವ ಏಕತೆ ಮತ್ತು ಸಮಾನತೆಯ ಅರಿವಿನ ಸಾಧನವನ್ನು ಮಹಿಳೆಯರು ಸಮೇತವಾಗಿ ಎಲ್ಲ ಕಾಯಕಜೀವಿಗಳಿಗೂ ನೀಡಿದರು. ಹೀಗೆ ಬಸವಣ್ಣನವರು ತಮ್ಮ ಶರಣಸಂಕುಲದಲ್ಲಿ ಲಿಂಗಭೇದ, ಜಾತಿ/ವರ್ಣಭೇದ ಮತ್ತು ವರ್ಗಭೇದವನ್ನು ತೊಡೆದುಹಾಕಿ ಮಾನವ ಏಕತೆಯನ್ನು ಸಾಧಿಸಿದರು.

ಬಸವಮಾರ್ಗದಿಂದ ಮಾತ್ರ ಈ ದೇಶ ಮತ್ತು ಜಗತ್ತು ಸಮೃದ್ಧಿಯನ್ನು ಸಾಧಿಸಲು ಸಾಧ್ಯವಾಗುವುದು.



# ಲಿಂಗವಂತರ ಪ್ರತಿಜ್ಞೆ

೧. ಏಕದೇವೋಪಾಸಕನಾದ ನನಗೆ ೩೩ ಕೋಟಿ ದೇವತೆಗಳಲ್ಲಿ ನಂಬಿಕೆ ಇಲ್ಲ.

೨. ದೇಹವೇ ದೇವಾಲಯ ಎಂಬುದನ್ನು ನಂಬಿದ ನಾನು ಗುಡಿ ಸಂಸ್ಕೃತಿಯವನಲ್ಲ.

೩. ವಿವಿಧ ವಚನಾಂಕಿತಗಳಿಂದ ಕರೆಯಲಾಗುವ ಲಿಂಗದೇವನೊಬ್ಬನೇ ದೇವ ಎಂಬುದರಲ್ಲಿ ನನಗೆ ನಂಬಿಕೆ ಇದೆ.

೪. ಇಷ್ಟಲಿಂಗವು ಲಿಂಗದೇವನ ಕುರುಹು ಎಂಬುದನ್ನು ನಾನು ಒಪ್ಪುತ್ತೇನೆ. ವಚನಾಂಕಿತ ತಿದ್ದುವುದನ್ನು ವಿರೋಧಿಸುತ್ತೇನೆ.

೫. ದೇವರನ್ನು ಯಾವುದೇ ಹೆಸರಿನಿಂದ ಕರೆದರೂ ದೇವನೊಬ್ಬನೇ ಎಂದು ನಾನು ಪ್ರತಿಪಾದಿಸುತ್ತೇನೆ.

೬ ಬಸವಣ್ಣನವರೇ ಲಿಂಗವಂತರ ಧರ್ಮಗುರು; ಇಷ್ಟಲಿಂಗ ಮಾತ್ರ ಲಿಂಗಾಂಗಸಾಮರಸ್ಯಯೋಗ ಎಂಬ ಪೂಜಾ ಸಾಧನ, ಬಸವಾದಿ ಶರಣರ ವಚನಗಳೇ ಧರ್ಮಗ್ರಂಥ, ಅನುಭಾವವೇ ಲಿಂಗವಂತರ ತತ್ತ್ವಜ್ಞಾನ ಮತ್ತು ಸಕಲ ಜೀವಾತ್ಮರಿಂದ ಕೂಡಿದ ವಿಶ್ವವೇ ಜಂಗಮಲಿಂಗ ಎಂಬುದು ನನ್ನ ದೃಢನಿರ್ಧಾರ.

೭ ರೂಢಿಗತವಾದ ಪಾದಪೂಜೆ ಲಿಂಗವಂತ ಧರ್ಮಸಮ್ಮತವಲ್ಲ ಎಂದು ನಾನು ವಾದಿಸುತ್ತೇನೆ.

೮. ಪಾದ ಎಂದರೆ ಜ್ಞಾನ. ಪಾದಪೂಜೆ ಎಂದರೆ ಜ್ಞಾನಪೂಜೆ. ಜ್ಞಾನಪೂಜೆ ಎಂದರೆ ಅರಿವಿನ ಸಾಕ್ಷಾತ್ಕಾರ. ಇಷ್ಟಲಿಂಗಪೂಜೆ ಇರುವುದು ಅರಿವಿನ ಸಾಕ್ಷಾತ್ಕಾರಕ್ಕಾಗಿ ಎಂಬುದನ್ನು ನಾನು ಒತ್ತಿಹೇಳುತ್ತೇನೆ.

೯. ಲಿಂಗವಂತ ಧರ್ಮದಲ್ಲಿ ಪೂಜೆ ಎಂದರೆ, ನಾವು ಅರಿವಿನ ಸಾಕ್ಷಾತ್ಕಾರದೊಂದಿಗೆ ನಮ್ಮೊಳಗಿನ ಮಹಾಘನದ ಜೊತೆ ಒಂದಾಗುವುದು. ಇದುವೆ ಲಿಂಗಾಂಗಸಾಮರಸ್ಯ ಎಂಬ ಭಾವ ನನ್ನಲ್ಲಿ ಅಚಲವಾಗಿದೆ.

೧೦. ಸರ್ವರೂ ಶಿವಸ್ವರೂಪಿಗಳಾಗಿರುವುದರಿಂದ ಮನುಷ್ಯರ ಮಧ್ಯೆ ಭೇದಭಾವ ಮಾಡುವುದನ್ನು ನಾನು ವಿರೋಧಿಸುತ್ತೇನೆ.

೧೧. ಮಾನಸಿಕ ಗುಲಾಮಗಿರಿಗೆ ಕಾರಣವಾಗುವ ಕರ್ಮಸಿದ್ಧಾಂತದಲ್ಲಿ ನನಗೆ ನಂಬಿಕೆ ಇಲ್ಲ.

೧೨. ಬಸವಾದಿ ಶರಣರ ಕಾಯಕ-ಪ್ರಸಾದ-ದಾಸೋಹ ಸಿದ್ಧಾಂತದಲ್ಲಿ ನನಗೆ ನಂಬಿಕೆ ಇದೆ.

೧೩. ಶರಣರ ಸರ್ವಸಮತ್ವ ನೀತಿಗೆ ಧಕ್ಕೆ ತರುವಂಥ ಕಾರ್ಯಗಳನ್ನು ನಾನು ಮಾಡುವುದಿಲ್ಲ.

೧೪. ನಾನು ಯಾವುದೇ ಶುಭಕಾರ್ಯವನ್ನು ಬಸವಾದಿ ಶರಣರ ನೆನೆಯದೆ ಆರಂಭಿಸುವುದಿಲ್ಲ.

೧೫. ಸಕಲ ಜೀವಾತ್ಮರಿಗೆ ಲೇಸನ್ನು ಬಯಸುತ್ತ ಕ್ರಿಯಾಶೀಲವಾಗುವುದನ್ನು ನಾನು ಪ್ರತಿಪಾದಿಸುತ್ತೇನೆ.

೧೬. ನಾನು ಕಳವು ಮಾಡುವುದಿಲ್ಲ;. ಕೊಲ್ಲುವುದಿಲ್ಲ; ಸುಳ್ಳು ಹೇಳುವುದಿಲ್ಲ; ಸಿಟ್ಟಿಗೆ ಬರುವುದಿಲ್ಲ;. ಹೊಗಳಿಕೊಳ್ಳುವುದಿಲ್ಲ; ಅಸಹ್ಯ ಪಡುವುದಿಲ್ಲ; ಅನ್ಯರು ಹಳಿದಾಗ ಅರ್ಥ ಮಾಡಿಕೊಳ್ಳಲು ಯತ್ನಿಸುತ್ತೇನೆ.

೧೭. ನನ್ನದು ಲಂಚವಂಚನಕ್ಕೆ ಕೈಯಾನದ ಭಾಷೆ. 'ನಾನು ಭ್ರಷ್ಟಾಚಾರಿ ಅಲ್ಲ' ಎಂದು ಸಾರುತ್ತೇನೆ.

೧೮. ಲಿಂಗಸಾರಾಯನಾದ ನಾನು ಮಾದಕವಸ್ತುಗಳ ಗುಲಾಮನಾಗುವುದಿಲ್ಲ.

೧೯. ವಾರ, ತಿಥಿ, ಸುಮುಹೂರ್ತ ಹಾಗೂ ಪಂಚಸೂತಕಗಳಾದ ಜನನ, ಮರಣ, ಜಾತಿ, ಎಂಜಲು, ರಜಸ್ಸೂತಕದಂಥ ಮೂಢನಂಬಿಕೆಗಳನ್ನು ತಿರಸ್ಕರಿಸುತ್ತೇನೆ.

೨೦. ನಾನು ಪುನರ್ಜನ್ಮವನ್ನು ನಂಬುವುದಿಲ್ಲ. ಆದರೆ ಇಷ್ಟಲಿಂಗ ಧರಿಸಿದ ಮೇಲೆ ಲಿಂಗತತ್ತ್ವದ ಅರಿವನ್ನು ಆಚರಣೆಗೆ ತರುವುದರ ಮೂಲಕ ಉಂಟಾಗುವ ವ್ಯಕ್ತಿತ್ವ ವಿಕಸನವೇ ಪುನರ್ಜನ್ಮ ಎಂದು ಭಾವಿಸುತ್ತೇನೆ.

೨೧. ಸ್ವರ್ಗ ನರಕಗಳು ಇಲ್ಲ ಎಂದು ನಾನು ಸಾರುತ್ತೇನೆ. ಆಚಾರವೇ ಸ್ವರ್ಗ, ಅನಾಚಾರವೇ ನರಕ ಎಂಬುದನ್ನು ಒಪ್ಪುತ್ತೇನೆ.

೨೨. ಕಾಯಕದ ಅನುಭವದ ಮೂಲಕವೇ ಅನುಭಾವಿಯಾಗಲು ಸಾಧ್ಯ ಎಂಬುದನ್ನು ಪ್ರತಿಪಾದಿಸುತ್ತೇನೆ.

೨೩. ದಯೆಯಿಂದ ಮಾತ್ರ ಮಾನವೀಯ ಜಗತ್ತಿನ ನಿರ್ಮಾಣ ಸಾಧ್ಯ ಎಂಬುದು ನನ್ನ ಅಚಲ ನಿರ್ಧಾರವಾಗಿದೆ.

೨೪. ಭವರೋಗದಿಂದ ರಕ್ಷಿಸುವ ಅಷ್ಟಾವರಣ, ವ್ಯಕ್ತಿತ್ವ ವಿಕಸನದ ಷಟ್‌ಸ್ಥಲ ಮತ್ತು ಸಕಲಜೀವಾತ್ಮರಿಗೆ ಲೇಸನೇ ಬಯಸುವ ಅರಿವನ್ನು ಆಚರಣೆಗೆ ತರುವ ಪಂಚಾಚಾರಗಳನ್ನು ಪಾಲಿಸುತ್ತೇನೆ.

೨೫. ಶರಣರ ತತ್ತ್ವಾದರ್ಶಕ್ಕೆ ತಕ್ಕಂತೆ ಬದುಕುತ್ತೇನೆ ಮತ್ತು ಜೀವಿಸುವ ಪ್ರತಿ ಕ್ಷಣವೂ ಮಹತ್ವದ್ದು ಎಂದು ಸಾರುತ್ತೇನೆ.





## ರಂಜಾನ್ ದರ್ಗಾ

ಕರ್ನಾಟಕ ಸರ್ಕಾರದ ರಾಷ್ಟ್ರೀಯ ಬಸವ ಪುರಸ್ಕಾರ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಮಾಧ್ಯಮ ಅಕಾಡೆಮಿ ಗೌರವ ಪ್ರಶಸ್ತಿ ಮುಂತಾದ 52 ಪ್ರಶಸ್ತಿಗಳ ವಿಜೇತ ರಂಜಾನ್ ದರ್ಗಾ ಅವರು ಬಂಡಾಯ ಸಾಹಿತ್ಯ ಪರಂಪರೆಯ ಶಕ್ತಿಶಾಲಿ ಕವಿಗಳಲ್ಲಿ ಒಬ್ಬರು. ಸಮಾಜ ವಿಜ್ಞಾನಿಯ ದೃಷ್ಟಿಕೋನದ ದರ್ಗಾ ಅವರ ಚಿಂತನೆಗಳ ಕೇಂದ್ರ ಕಾಳಜಿ ಶರಣ ಸಾಹಿತ್ಯ, ಸಮತಾವಾದ ಮತ್ತು ಸೂಫಿ ವಿಚಾರಗಳ ನೆಲೆಯಲ್ಲಿ ವಚನ ಚಳವಳಿಯ ತತ್ತ್ವಗಳಿಗೆ ಹೊಸ ಹೊಳಹು ನೀಡುವುದರಲ್ಲಿ ತಲ್ಲೀನರಾಗಿದ್ದಾರೆ.

ವಿಜಾಪುರ ನಗರದಲ್ಲಿ 20.06.1051ರಂದು ಜನಿಸಿದ ರಂಜಾನ್ ದರ್ಗಾ ಅವರ ಬರಹಗಳಲ್ಲಿ ಬುದ್ಧ, ಪೈಗಂಬರ್, ಬಸವಣ್ಣ, ಮಾರ್ಕ್ಸ್, ವಿವೇಕಾನಂದ, ಗಾಂಧಿ ಮತ್ತು ಅಂಬೇಡ್ಕರ್ ಚಿಂತನೆಗಳನ್ನು ಕಾಣಬಹುದು.

ಕಾವ್ಯ ಬಂತು ಬೀದಿಗೆ (ಕಾವ್ಯ –1978), ಹೊಕ್ಕಳಲ್ಲಿ ಹೂವಿದೆ (ಕಾವ್ಯ), ನೆಲ್ಸನ್ ಮಂಡೇಲಾ, ಬಸವಣ್ಣನವರ ದೇವರು, ವಚನ ಬೆಳಕು, ಬಸವ ಧರ್ಮದ ವಿಶ್ವಸಂದೇಶ, ಬಸವಪ್ರಜ್ಞೆ, ನಡೆ ನುಡಿ ಸಿದ್ಧಾಂತ, ಲಿಂಗವ ಪೂಜಿಸಿ ಫಲವೇನಯ್ಯಾ, ಜಾತಿ ವ್ಯವಸ್ಥೆಗೆ ಸವಾಲಾದ ಶರಣರು, ಶರಣರ ಸಮಗ್ರ ಕ್ರಾಂತಿ, ಸೌಹಾರ್ದ ಸೌರಭ, ಬಸವಣ್ಣ ಮತ್ತು ಅಂಬೇಡ್ಕರ್, ಅಮೃತ ಮತ್ತು ವಿಷ, ಮೂರ್ತ ಮತ್ತು ಅಮೂರ್ತ, ಸಾಹಿತ್ಯ ಮತ್ತು ಸಮಾಜ, ಬಸವಣ್ಣ ಏಕೆ ಬೇಕು?, ಲಿಂಗವಂತ ಧರ್ಮದಲ್ಲಿ ಏನುಂಟು ಏನಿಲ್ಲ?, ದಾಸೋಹ ಜ್ಞಾನಿ ನುಲಿಯ ಚಂದಯ್ಯ (ಸಂಶೋಧನೆ) ಮುಂತಾದವು ಅವರ ಪ್ರಕಟಿತ ಕೃತಿಗಳಾಗಿವೆ.

ಕಲಬುರಗಿಯ ಕೇಂದ್ರೀಯ ವಿಶ್ವವಿದ್ಯಾಲಯ ಸೇರಿದಂತೆ ಮೈಸೂರು, ಜೆ.ಎಸ್.ಎಸ್., ಬೆಂಗಳೂರು, ಮಂಗಳೂರು, ಗುಲಬರ್ಗಾ, ಕರ್ನಾಟಕ, ಕುವೆಂಪು, ರಾಣಿ ಚೆನ್ನಮ್ಮ ಮತ್ತು ಮಹಿಳಾ ವಿಶ್ವವಿದ್ಯಾಲಯಗಳ ಕಾಲೇಜುಗಳ ಪಠ್ಯಕ್ರಮದಲ್ಲಿ ಇವರ ವಿವಿಧ ಲೇಖನ, ಕವನ ಮತ್ತು ಪುಸ್ತಕಗಳನ್ನು ಅಳವಡಿಸಲಾಗಿದೆ.

ರಷ್ಯಾ, ಬೈಲೊರಷ್ಯಾ, ಉಜ್‌ಬೆಕಿಸ್ತಾನ್, ನೆದರ್‌ಲ್ಯಾಂಡ್ಸ್, ಫ್ರಾನ್ಸ್, ಲೆಬನಾನ್, ಕೆನಡಾ, ಅಮೆರಿಕಾ, ಆಸ್ಟ್ರೇಲಿಯಾ, ನ್ಯೂಜಿಲೆಂಡ್, ಸಿಂಗಪುರ, ಯು.ಎ.ಇ. (ದುಬೈ, ಅಬುಧಾಬಿ) ಬಹರೇನ್, ಇಂಡೋನೇಷ್ಯಾ, ಮಾರಿಷಸ್ ಮುಂತಾದ ದೇಶಗಳಲ್ಲಿ ಶರಣ ಸಂಸ್ಕೃತಿ, ಶಾಂತಿ ಮತ್ತು ಮಾನವ ಏಕತೆ ಕುರಿತು ಉಪನ್ಯಾಸ ನೀಡಿದ್ದಾರೆ.

ಪ್ರಜಾವಾಣಿ ದಿನಪತ್ರಿಕೆಯಲ್ಲಿ ಸುದ್ದಿ ಸಂಪಾದಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿರುವ ರಂಜಾನ್ ದರ್ಗಾ ಈಗ ಧಾರವಾಡ ನಿವಾಸಿಯಾಗಿದ್ದಾರೆ.

ಬಸವರಾಜ ಹೂಗಾರ ಎಂಬವರು "ರಂಜಾನ್ ದರ್ಗಾ: ಬದುಕು ಬರಹ" ಎಂಬ ಮಹಾಪ್ರಬಂದ ಬರೆದು ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪಿಎಚ್‌ಡಿ ಪಡೆದಿದ್ದಾರೆ.

ಧನಂಜಯ ಪಿ.ಕೆ. ಎಂಬವರು "ರಂಜಾನ್ ದರ್ಗಾ ಅವರ ಸಾಹಿತ್ಯ ಮತ್ತು ಸಂವೇದನೆ" ಎಂಬ ಮಹಾಪ್ರಬಂಧ ಬರೆದು ಮದ್ರಾಸ ವಿಶ್ವವಿದ್ಯಾಲಯದಿಂದ ಪಿಎಚ್‌ಡಿ ಪಡೆದಿದ್ದಾರೆ.



If you his (Basava's) followers practice his precepts, you would uplift not just Bharat, but the World.

- **Mahatma Gandhi**, in the year 1924, in Belgaum



It's amazing and extraordinary that Basaveshwara professed, campaigned and advocated genuine democracy, human rights, gender equality way back in the 12th century even before anyone in United Kingdom had even thought about it.

- **Rt. Hon. John Bercow**

Speaker of the British Parliament, made his statement on 21.1.2013



If Lingayatism was an island thrown up within the "boundless sea of Hinduism," it would appear that the waters of the ocean are doing their upmost to undermine its solid foundations.

- **Edgar Thurston** (1855- 1935)

Caste and tribes of India, 1908, Volume 4, Page 260



Whatever legend may say of Basava, the fact is pretty clear that he was the first Indian free thinker. He might be called the Luther of India. The acknowledged leadership of the priests was in full swing when Basava came upon the scene, and there was a movement on foot to replace caste and priestly authority with intelligence and free thinking. Basava, a Shivaite Brahman, was in the camp of liberals. He mounted the rostrum for the abolition of caste and ceremonies, and preached that all men were by birth equal, that one sex was as important as another, that child marriage was wrong, and that widows should be permitted to remarry. He promised the Lingayats freedom of individual action. All wearers of the divine lingam were to occupy a common level; they were to eat together and to intermarry. For a while the simplicity of his teaching appealed to the people, but soon, as they increased in wealth and numbers, they wanted their old distinctions back, as these increased their importance. Ceremonies and elaborate rituals crept into their worship, and thus as new converts entered, they were placed on lower strata, while the priests got back their old power and again became the privileged caste.

- **Arthur Miles**,The Land of the Lingam (1933)

## THE RELIGION OF HUMAN RIGHTS


Manava Hakkugala Dharma

Basava established a socio-religious Parliament called Anubhava Mantap. There were 770 representatives including women from all cross sections of society. Allama Prabhu who was a genius from the lower strata of the society, became the first speaker of the Parliament. Here everybody had freedom of expression. It was the center of social, economic, religious and philosophical interaction. It stood for the social justice and human rights. According to Universal Declaration of Human Rights by General Assembly of UNO, there are 30 points of Human Rights. All the 30 points are in 12th century Basava's Vachanas. He declared that there is no difference between the rights of legitimate child and illegitimate child. He pleaded equality in every walk of life.

## THE RELIGION WITHOUT TEMPLE AND IDOLS


Murthy illada Dharma

The rich temples were the centers of exploitation. They were the meeting places of Brahmans, big businessmen, landlords and officers of the Kings' Courts. They were under the clutches of religious heads. This group was able to control even the kings. The Kings used to keep this group in good mood. Many times it was inevitable to the masses to give revenue to the famous temples also. Thus people were exploited by the Kings and the temple authority. The rich temples were like Swiss Banks, Five Star Hotels and centers of worldly pleasure for the rich. The temple dancers were always at their service. These are the reasons for Basava to reject the temples. He declared: Body itself is the temple. Thus he denied the idol worship and declared God is within every being.

## THE RELIGION WITHOUT CASTE AND GENDER DISCRIMINATION


Jaati illada Dharma

Basaveshwar (Basava) established Lingayat Religion. He denied gender, caste, class and racial discriminations. He created the Ishtalinga, which is the small black round shape form object. The working class, lower cast, poor or rich men and women who embrace Lingayat Religion should carry the Ishtalinga on their chest after Deeksha. Thus cobbler Haralayya and Brahman Madhuvarasa, who was one of the ministers of Kinga Bijjala's cabinet, became Lingayats. The followers of the religion arranged the marriage of Haralayya's son and Madhuvarasa's daughter. But the Brahmans became upset because it was against Manu's code. The King ordered. Haralayya and Madhuvarasa were given capital punishment called Elehoote i.e. dragging the accused on street by an elephant.

## THE RELIGION OF WORKING CLASS


Kayaka Dharma

In 12th century, Basava united the workers of different castes and communities and created a new society without any kind of discrimination. The new Lingayat society created by Basava is called Sharana Sankula. This is the first formation the working class society in the world without the discrimination among men and women, rich and poor, black and white. According to Basava, there is no hierarchy in professions. He was Prime Minister. But never thought his profession is superior to a cobbler's profession. His followers produced literature also. Their short devotional songs are of social consciousness. The songs are called Vachanas. So far Vachanas of 221 Sharanas were collected. 34 women writers were among them. This is the first working class literature in the world.

- Ramjan Darga